CPMG / KA / BG-GPO/13 / 2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೩೯ | ಬೆಂಗಳೂರು, ಗುರುವಾರ, ಏಪ್ರಿಲ್ ೨೯, ೨೦೦೪ (ವೈಶಾಖ ೯, ಶಕ ವರ್ಷ ೧೯೨೬) | ಸಂಚಿಕೆ ೧೮ |
|---|---|---|



## ಭಾಗ-೪-ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 4 ರಾಶಾಪ್ರ 2004, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್ 2004**

ಕರ್ನಾಟಕ ರೇಷ್ಮೆಹುಳು ಬಿತ್ತನೆ, ರೇಷ್ಮೆಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 (1966ರ 16) ಇದರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963 ಪ್ರಕರಣ 5ಎ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

### ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959

### ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು:**

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**I**

**1960ರ ಅಧಿನಿಯಮ 5.-** ಈ ಮುಂದಿನ ಅಧಿನಿಯಮಗಳು ಹೊಸ ಮೈಸೂರು ರಾಜ್ಯದ ವಿವಿಧ ಪ್ರದೇಶಗಳಲ್ಲಿ ಜಾರಿಯಲ್ಲಿವೆ:-

1. ಮೈಸೂರು ರೇಷ್ಮೆ ಹುಳು ರೋಗಗಳ ನಿಯಂತ್ರಣ ಅಧಿನಿಯಮ, 1943 (1943ರ ಮೈಸೂರು ಅಧಿನಿಯಮ,VIII).
2. ಮೈಸೂರು ರೇಷ್ಮೆ ಹುಳು ಬಿತ್ತನೆ (ವಿತರಣೆಯ ನಿಯಂತ್ರಣ) ಅಧಿನಿಯಮ, 1952 (1952ರ ಮೈಸೂರು ಅಧಿನಿಯಮ, XXXIII).
3. ಮದರಾಸು ರೇಷ್ಮೆ ಹುಳು ರೋಗಗಳ (ನಿವಾರಣೆ ಮತ್ತು ನಿರ್ಮೂಲನೆ) ಅಧಿನಿಯಮ, 1948 (1948ರ ಮದರಾಸು ಅಧಿನಿಯಮ,II).
4. ಮದರಾಸು ರೇಷ್ಮೆ ಹುಳು ಬಿತ್ತನೆ (ಉತ್ಪಾದನೆ, ಸರಬರಾಜು ಮತ್ತು ವಿತರಣೆ) ಅಧಿನಿಯಮ, 1956 (1956ರ ಮದರಾಸು ಅಧಿನಿಯಮ, XXIII).

ಮೊದಲು ನಮೂದಿಸಿದ ಅಧಿನಿಯಮವನ್ನು, ರೇಷ್ಮೆ ಹುಳು ಬಿತ್ತನೆ (ವಿತರಣೆಯ ನಿಯಂತ್ರಣ) ಅಧಿನಿಯಮ, 1952 ಇದನ್ನು ಆ ತರುವಾಯ ಅಂಗೀಕರಿಸಿದ್ದರಿಂದಾಗಿ ಜಾರಿಗೊಳಿಸಲಿಲ್ಲ.

ಮೂರನೆಯದಾಗಿ ನಮೂದಿಸಿದ, ಮದರಾಸು ಸರ್ಕಾರದ, ಮದರಾಸು ಅಧಿನಿಯಮವು, ಮೈಸೂರು ರೇಷ್ಮೆಹುಳು ರೋಗಗಳ ನಿಯಂತ್ರಣ ಅಧಿನಿಯಮ, 1943 ಇದರಂತೆಯೇ ಇರುತ್ತದೆ. ಅದಕ್ಕೇ ಅದನ್ನು ಮದರಾಸು ಸರ್ಕಾರವು ಜಾರಿಗೊಳಿಸಿಲ್ಲ.

ರಾಜ್ಯದ ಪುನಸ್ಸಂಘಟನೆಯ ಪರಿಣಾಮವಾಗಿ, ಪುನಸ್ಸಂಘಟಿಸಲಾದ ಇಡೀ ಮೈಸೂರು ರಾಜ್ಯಕ್ಕೆ ಅನ್ವಯಿಸುವ ಸಾಮಾನ್ಯ ಕಾನೂನನ್ನು ರೂಪಿಸಿಕೊಳ್ಳುವುದು ಅವಶ್ಯವಾಗಿದೆ. ಆದ್ದರಿಂದ ಮೇಲೆ ಹೇಳಲಾದ ಅಧಿನಿಯಮಗಳನ್ನು ನಿರಸನಗೊಳಿಸಲು ಮತ್ತು ಇಡೀ ರಾಜ್ಯಕ್ಕೆ ಅನ್ವಯಿಸುವ ಏಕರೂಪದ ಕಾನೂನನ್ನು ಅಧಿನಿಯಮಿಸಲು ಪ್ರಸ್ತಾವಿಸಲಾಗಿದೆ. ಆದ್ದರಿಂದ ಮೈಸೂರು ರೇಷ್ಮೆ ಹುಳು ಬಿತ್ತನೆ (ಉತ್ಪಾದನೆ, ಸರಬರಾಜು ಮತ್ತು ವಿತರಣೆ) ವಿಧೇಯಕ, 1958 ಎಂದು ಕರೆಯಲಾಗುವ ಈ ವಿಧೇಯಕ.

ಈ ವಿಧೇಯಕವು, ಇತರೆ ವಿಷಯಗಳೂ ಸೇರಿದಂತೆ, ರೇಷ್ಮೆ ಹುಳು ಬಿತ್ತನೆಯ ಉತ್ಪಾದನೆಗೆ ಲೈಸೆನ್ಸ್ ನೀಡಿಕೆ, ರೇಷ್ಮೆ ಹುಳು ಮತ್ತು ರೇಷ್ಮೆ ಗೂಡುಗಳ ಸಾಕಣೆ, ಸ್ವಾಧೀನ, ವಿಲೆ, ಮಾರಾಟ, ಖರೀದಿ ಇವುಗಳ ವಿನಿಯಮನ, ರೀಲಿಂಗ್ ಉದ್ಯಮ ಸಂಸ್ಥೆಗಳಿಗೆ ಲೈಸೆನ್ಸ್ ನೀಡಿಕೆ ಮತ್ತು ರೇಷ್ಮೆ ಗೂಡು ಮಾರುಕಟ್ಟೆಗಳ ನಿಯಂತ್ರಣ ಇವುಗಳಿಗೆ ಉಪಬಂಧ ಕಲ್ಪಿಸುತ್ತದೆ.

(ಕರ್ನಾಟಕ ರಾಜ್ಯ ಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ 5ನೇ ನವೆಂಬರ್ 1958 ರಲ್ಲಿ ಸಂಖ್ಯೆ 157 ಎಂದು ಪ್ರಕಟಿಸಲಾಗಿದೆ.)

**II**

**1969ರ ತಿದ್ದುಪಡಿ ಮಾಡುವ ಅಧಿನಿಯಮ 29:-** ರೇಷ್ಮೆಗೂಡುಗಳ ಉತ್ಪಾದನೆ, ಸರಬರಾಜು ಮತ್ತು ವಿತರಣೆಯನ್ನು ಹೆಚ್ಚು ಪರಿಣಾಮಕಾರಿಯಾಗಿ ವಿನಿಯಮಿಸುವುದಕ್ಕಾಗಿ ಈ ಮುಂದಿನವುಗಳಿಗಾಗಿ ಉಪಬಂಧ ಕಲ್ಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ, ಎಂದರೆ:-

(i) ಸಾಕಣೆದಾರರಿಗೆ ಲೈಸೆನ್ಸ್ ನೀಡಿಕೆ;
(ii) ಅಧಿನಿಯಮದ ಮೇರೆಗೆ ಸ್ಥಾಪಿಸಲಾಗಿರುವ ರೇಷ್ಮೆಗೂಡು ಮಾರುಕಟ್ಟೆಗಳಲ್ಲಿ ಹೊರತು ಇತರ ಕಡೆಗಳಲ್ಲಿ ರೇಷ್ಮೆಗೂಡುಗಳ ಮಾರಾಟ ಅಥವಾ ಖರೀದಿಯನ್ನು ನಿಷೇಧಿಸುವುದು;

(iii) ಕೆಲವು ಅಪರಾಧಗಳಿಗೆ ದಂಡಗಳನ್ನು ಹೆಚ್ಚಿಸುವುದು; ಮತ್ತು

(iv) ಇತರ ಪ್ರಾಸಂಗಿಕ ವಿಷಯಗಳು.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV- 2ಎ, ದಿನಾಂಕ 1ನೇ ಸೆಪ್ಟೆಂಬರ್, 1969, ಪುಟ 6 ರಲ್ಲಿ, ಸಂಖ್ಯೆ 429 ಎಂದು ಪ್ರಕಟಿಸಲಾಗಿದೆ).

**III**

**1979ರ ತಿದ್ದುಪಡಿ ಮಾಡುವ ಅಧಿನಿಯಮ 33:-** ರಾಜ್ಯದಲ್ಲಿ, ವ್ಯಾಪಾರಿಗಳ ಅವ್ಯವಹಾರಗಳ ಬಗ್ಗೆ ರೇಷ್ಮೆನೂಲಿನ ಮಾರಾಟಗಾರರಿಂದ ದೂರುಗಳು ಬಂದಿರುವುದರಿಂದ, ಕರ್ನಾಟಕ ರೇಷ್ಮೆಹುಳು ಬಿತ್ತನೆ, ರೇಷ್ಮೆಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು,ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 ಇದನ್ನು ತಿದ್ದುಪಡಿ ಮಾಡುವ ಮೂಲಕ, ರಾಜ್ಯದಲ್ಲಿ, ರೇಷ್ಮೆ ವಿನಿಮಯ ಕೇಂದ್ರಗಳ ಸ್ಥಾಪನೆಗೆ, ಮತ್ತು ರೇಷ್ಮೆ ವಿನಿಯಮ ಕೇಂದ್ರಗಳಲ್ಲಿ ರೇಷ್ಮೆ ನೂಲಿನ ಮಾರಾಟ ಮತ್ತು ಖರೀದಿಯ ವಿನಿಮಯಕ್ಕೆ ಉಪಬಂಧ ಕಲ್ಪಿಸುವ ಮೂಲಕ ರೀಲರ್‌ಗಳ ಹಿತಾಸಕ್ತಿಯನ್ನು ರಕ್ಷಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ 1ನೇ ಜೂನ್ 1979ರ ಪುಟ 8 ರಲ್ಲಿ, ಸಂಖ್ಯೆ 538 ಎಂದು ಪ್ರಕಟಿಸಲಾಗಿದೆ).

**IV**

**1980ರ ತಿದ್ದುಪಡಿ ಮಾಡುವ ಅಧಿನಿಯಮ 12:** ನೂಲು ಹುರಿ ಮಾಡುವವರ ಪೈಕಿ ಕೆಲವರು, ಹುರಿ ಮಾಡಿದ ರೇಷ್ಮೆ ನೂಲನ್ನು ಮಾರಾಟಕ್ಕಾಗಿ ರೇಷ್ಮೆ ವಿನಿಮಯ ಕೇಂದ್ರಕ್ಕೆ ಪುನಃ ತರುವಂತೆ ತಮ್ಮನ್ನು ಅಗತ್ಯಪಡಿಸುವ ಕಾರಣ ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು (ಉತ್ಪಾದನೆ, ಸರಬರಾಜು ಮತ್ತು ವಿತರಣೆಯ ವಿನಿಯಮನ) ಅಧಿನಿಯಮದ 8ನೇ ಪ್ರಕರಣದ ಉಪಬಂಧಗಳಿಂದ ತಮಗೆ ಕಷ್ಟವಾಗುತ್ತದೆಂದು ಮನವಿ ಸಲ್ಲಿಸಿದ್ದಾರೆ.

ಆದಾಗ್ಯೂ, ರೇಷ್ಮೆನೂಲಿನ ವ್ಯಾಪಾರಿಯು ರೇಷ್ಮೆನೂಲನ್ನು ಹುರಿ ಮಾಡಿದ ಮೇಲೆ ಮಾರಾಟಕ್ಕಾಗಿ ರೇಷ್ಮೆ ವಿನಿಮಯ ಕೇಂದ್ರಕ್ಕೆ ಅದನ್ನು ತರಬೇಕಾಗಿಲ್ಲ. 8ಎ ಪ್ರಕರಣದ ಪ್ರಕಾರ ಹುರಿ ಮಾಡುವ ಉದ್ದೇಶಕ್ಕಾಗಿ ರೇಷ್ಮೆ ವಿನಿಮಯ ಕೇಂದ್ರದಿಂದ ರೇಷ್ಮೆ ನೂಲನ್ನು ಖರೀದಿ ಮಾಡುವ ನೂಲು ಹುರಿ ಮಾಡುವವರು ಮಾತ್ರವೇ ಅದನ್ನು ಹುರಿ ಮಾಡಿದ ಮೇಲೆ ರೇಷೆ ವಿನಿಮಯ ಕೇಂದ್ರಕ್ಕೆ ಮಾರಾಟಕ್ಕಾಗಿ ಅದನ್ನು ಪುನಃ ತರಬೇಕಾಗುತ್ತದೆ. ಆದ್ದರಿಂದ ಮಾರಾಟಕ್ಕಾಗಿ ರೇಷ್ಮೆ ವಿನಿಮಯ ಕೇಂದ್ರಕ್ಕೆ ಹುರಿ ಮಾಡಿದ ರೇಷ್ಮೆ ನೂಲನ್ನು ಪುನಃ ತರುವುದರಿಂದ ಹುರಿ ಮಾಡುವವನನ್ನು ಹೊರತುಪಡಿಸಲು 8ಎ ಪ್ರಕರಣಕ್ಕೆ ತಿದ್ದುಪಡಿ ಮಾಡಲು ಉದ್ದೇಶಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV- 2ಎ, ದಿನಾಂಕ 3ನೇ ಮಾರ್ಚ್ 1980ರ, ಪುಟ 4 ರಲ್ಲಿ, ಸಂಖ್ಯೆ 163 ಎಂದು ಪ್ರಕಟಿಸಲಾಗಿದೆ).

**V**

**1981ರ ತಿದ್ದುಪಡಿ ಮಾಡುವ ಅಧಿನಿಯಮ 6:-** ಕಾಲಕಾಲಕ್ಕೆ ತಿದ್ದುಪಡಿಯಾದಂಥ ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 ಇದು ಇತರ ವಿಷಯಗಳೊಂದಿಗೆ, ರಾಜ್ಯದಲ್ಲಿ ಉತ್ಪಾದಿಸಲಾದ ರೇಷ್ಮೆ ನೂಲಿನ ಮಾರಾಟ ಮತ್ತು ಖರೀದಿಯನ್ನು ವಿನಿಯಮಿಸುತ್ತದೆ ಮತ್ತು ರೇಷ್ಮೆ ವಿನಿಮಯ ಕೇಂದ್ರದಲ್ಲಿ ರೇಷ್ಮೆ ನೂಲಿನ ಮಾರಾಟ ಮತ್ತು ಖರೀದಿಯ ಮೇಲೆ ಮಾರುಕಟ್ಟೆ ಶುಲ್ಕವನ್ನು ವಿಧಿಸಲು ಉಪಬಂಧ ಕಲ್ಪಿಸುತ್ತದೆ. 18(2) (ಹೆಚ್‌ಎ) ಪ್ರಕರಣಕ್ಕೆ ಅನುಸಾರವಾಗಿ, ಮಾರುಕಟ್ಟೆ ಶುಲ್ಕವನ್ನು ರೀಲರುಗಳು ಎಂದರೆ ನೂಲು ಹುರಿ ಮಾಡುವವರು ಮತ್ತು ವ್ಯಾಪಾರಿಗಳೂ ಆಗಿರುವ ರೀಲರುಗಳು ಸಂದಾಯ ಮಾಡಬೇಕಾಗುತ್ತದೆ. ಮಾರಾಟದ ಉದ್ದೇಶಕ್ಕಾಗಿ ರೇಷ್ಮೆ ನೂಲನ್ನು ಖರೀದಿಸುವಂಥ ವ್ಯಾಪಾರಿಗಳು ಮಾತ್ರ ಮಾರುಕಟ್ಟೆ ಶುಲ್ಕವನ್ನು ಸಂದಾಯ ಮಾಡಬೇಕಾಗುತ್ತದೆ ಮತ್ತು ರೇಷ್ಮೆ ವಿನಿಮಯ ಕೇಂದ್ರದಲ್ಲಿ ರೇಷ್ಮೆನೂಲಿನ ಖರೀದಿಗಾಗಿ ಲೈಸೆನ್ಸ್ ಪಡೆದ ನೂಲು ಹುರಿ ಮಾಡುವವರು ಮತ್ತು ನೇಕಾರರು ಶುಲ್ಕ ಸಂದಾಯದಿಂದ ವಿನಾಯಿತಿ ಪಡೆಯುತ್ತಾರೆ ಎಂಬ ಅರ್ಥವನ್ನು ಅಧಿನಿಯಮದ 18(2) (ಹೆಚ್‌ಎ) ಪ್ರಕರಣದಲ್ಲಿ ಬಳಸಲಾದ "ವ್ಯಾಪಾರಿ" ಎಂಬ ಪದವು ನೀಡುತ್ತದೆಂದು ನ್ಯಾಯಾಲಯಗಳ ಮುಂದಿನ ಕೆಲವು ಪ್ರಕರಣಗಳಲ್ಲಿ ವಾದಿಸಲಾಗಿದೆ. 18(2) (ಹೆಚ್‌ಎ) ಪ್ರಕರಣದಲ್ಲಿ ಬಳಸಲಾದ "ವ್ಯಾಪಾರಿ" ಎಂಬ ಪದಕ್ಕೆ ಲೈಸೆನ್ಸ್ ಪಡೆದ "ವ್ಯಾಪಾರಿ" ಎಂಬ ಪದವನ್ನು ಪ್ರತಿಯೋಜಿಸುವ ಮೂಲಕ ವಿಷಯವನ್ನು ಸ್ಪಷ್ಟೀಕರಿಸುವುದು ಅವಶ್ಯವಾಗಿದೆ.

18(2) (ಹೆಚ್‌ಎ) ಪ್ರಕರಣವು ರೇಷ್ಮೆ ವಿನಿಮಯ ಕೇಂದ್ರದಲ್ಲಿ ಮಾರುಕಟ್ಟೆ ಶುಲ್ಕವನ್ನು ವಿಧಿಸಲು ಉಪಬಂಧಿಸುತ್ತದೆ. ಶುಲ್ಕವನ್ನು ವಿಧಿಸುವ ಮತ್ತು ಸಂಗ್ರಹಿಸುವ ಅಧಿಕಾರ ಹೊಂದಿದ ಪ್ರಾಧಿಕಾರವನ್ನು ಗೊತ್ತುಪಡಿಸುವ ನಿರ್ದಿಷ್ಟ ಉಪಬಂಧವನ್ನು ರಚಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ.

18(2) (ಹೆಚ್‌ಎ) ಪ್ರಕರಣವು ಮಾರುಕಟ್ಟೆ ಶುಲ್ಕವನ್ನು ವಿಧಿಸುವುದಕ್ಕೆ ಸಂಬಂಧಿಸಿದ ನಿಯಮಗಳನ್ನು ರಚಿಸಲು ಮತ್ತು ಶುಲ್ಕದ ದರವನ್ನು ಸೂಚಿಸಲಾದ ಗರಿಷ್ಠ ಮೊಬಲಗಿಗೆ ಒಳಪಟ್ಟು ಗೊತ್ತುಪಡಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ. ನಿಯಮಗಳ 171ನೇ ನಿಯಮವು ಶುಲ್ಕ ವಿಧಿಸುವುದನ್ನು ಗೊತ್ತುಪಡಿಸಿದೆ. ಕರ್ನಾಟಕ ಉಚ್ಚ ನ್ಯಾಯಾಲಯವು, ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆಗೂಡು ಮತ್ತು ರೇಷ್ಮೆನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟದ ವಿನಿಯಮನ) ಅಧಿನಿಯಮ, 1959ರ ಸಂವೈಧಾನಿಕ ಸಿಂಧುತ್ವವನ್ನು ಪ್ರಶ್ನಿಸಿ ಸಲ್ಲಿಸಲಾದ ರಿಟ್ ಅರ್ಜಿಯನ್ನು ವಿಲೆ ಮಾಡುತ್ತಾ ಅಧಿನಿಯಮದ ಸಿಂಧುತ್ವವನ್ನು ಎತ್ತಿಹಿಡಿದಿದೆ. ಆದರೆ 171ನೇ ನಿಯಮವನ್ನು ಅಧಿಕಾರಕ್ಕೆ ಮೀರಿದುದೆಂದು ನ್ಯಾಯಾಲಯವು ರದ್ದುಗೊಳಿಸಿದೆ. ತತ್ಪರಿಣಾಮವಾಗಿ ಹೊಸ ನಿಯಮವನ್ನು ರೂಪಿಸಲಾಯಿತು ಮತ್ತು ಅದನ್ನು 8ನೇ ಡಿಸೆಂಬರ್, 1980 ರಿಂದ ಜಾರಿಗೆ ತರಲಾಯಿತು ಮತ್ತು ಹೊಸ ನಿಯಮ 171ನ್ನು ಪೂರ್ವಾನ್ವಯವಾಗಿ ಜಾರಿಗೊಳಿಸುವ ಮೂಲಕ ರದ್ದುಗೊಳಿಸಿದ ನಿಯಮವು ಜಾರಿಯಲ್ಲಿಲ್ಲದ ಅವಧಿಯಲ್ಲಿ ಮಾಡಿದ ಮಾರುಕಟ್ಟೆ ಶುಲ್ಕದ ಸಂಗ್ರಹಣೆಯನ್ನು ಕಾನೂನು ಮಾನ್ಯವಾಗಿ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV- 2ಎ, ದಿನಾಂಕ 28ನೇ ಮಾರ್ಚ್ 1981ರ ಪುಟ ಸಂಖ್ಯೆ 4 ಮತ್ತು 5 ರಲ್ಲಿ, ಸಂಖ್ಯೆ 214 ಎಂದು ಪ್ರಕಟಿಸಲಾಗಿದೆ).

## VI

**1984ರ ತಿದ್ದುಪಡಿ ಮಾಡುವ ಅಧಿನಿಯಮ 20.-** ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959ರ 12ನೇ ಪ್ರಕರಣದ ಮೇರೆಗೆ, ರೇಷ್ಮೆ ನಿರ್ದೇಶಕರಿಗೆ ಸದರಿ ಅಧಿನಿಯಮದ 3, 7, 8 ಮತ್ತು 8ಎ ಪ್ರಕರಣಗಳ ಉಪಬಂಧಗಳನ್ನು ಉಲ್ಲಂಘಿಸುವ ವ್ಯಕ್ತಿಗಳಿಗೆ ದಂಡ ವಿಧಿಸುವ ಅಧಿಕಾರಗಳನ್ನು ನೀಡಲಾಗಿದೆ. ಅಂಥ ವ್ಯಕ್ತಿಗಳಿಂದ ಅಂಥ ದಂಡವನ್ನು ವಸೂಲಿ ಮಾಡುವ ವಿಧಾನದ ಬಗ್ಗೆ ಅಧಿನಿಯಮದಲ್ಲಿ ಉಪಬಂಧಿಸಿರುವುದಿಲ್ಲ. ಆದ್ದರಿಂದ ದಂಡವನ್ನು ಮತ್ತು ಇತರ ಬಾಕಿ ಮೊತ್ತವನ್ನು ಭೂ ಕಂದಾಯದ ಬಾಕಿಯಂತೆ ವಸೂಲಿ ಮಾಡುವುದಕ್ಕಾಗಿ ಉಪಬಂಧ ಕಲ್ಪಿಸಲು ಪ್ರಸ್ತಾವಿಸಲಾಗಿದೆ. ಹಾಗೂ ನಿಯಮಗಳನ್ನು ಪೂರ್ವಾನ್ವಯವಾಗುವಂತೆ ರಚಿಸುವ ಅಧಿಕಾರವನ್ನು ತೆಗೆದುಕೊಳ್ಳುವುದೂ ಸಹ ಅಗತ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV- 2ಎ, ದಿನಾಂಕ 6ನೇ ಫೆಬ್ರವರಿ 1964ರ ಪುಟ 3 ರಲ್ಲಿ, ಸಂಖ್ಯೆ 105 ಎಂದು ಪ್ರಕಟಿಸಲಾಗಿದೆ).

## VII

**1994ರ ತಿದ್ದುಪಡಿ ಮಾಡುವ ಅಧಿನಿಯಮ 30.-** ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 ಇದನ್ನು ಈ ಮುಂದಿನ ಉದ್ದೇಶಗಳಿಗಾಗಿ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ, ಎಂದರೆ.-

(i) ಬಣ್ಣಗಾರನ ಸಂಬಂಧದಲ್ಲಿ ಸಹ ರೇಷ್ಮೆನೂಲಿನ ಸ್ವಾಧೀನವನ್ನು ವಿನಿಯಮಿಸಲು ಉಪಬಂಧಿಸುವುದು;

(ii) ರೇಷ್ಮೆತಳಿಗಳು, ಇತ್ಯಾದಿಗಳ ಸಂಶೋಧನೆ ಮತ್ತು ಅಭಿವೃದ್ಧಿಯನ್ನು ಕೈಗೊಳ್ಳಲು ಖಾಸಗಿ ಸಂಸ್ಥೆಗಳಿಗೆ ಅಥವಾ ಸಂಘಟನೆಗಳಿಗೆ ಅಧಿಕಾರ ನೀಡುವುದು;

(iii) ಜುಲ್ಮಾನೆಯನ್ನು ಹೆಚ್ಚಿಸುವುದು;

(iv) ದಂಡವನ್ನು ಹೆಚ್ಚಿಸುವುದು.

ಕೆಲವು ಪ್ರಾಸಂಗಿಕ ತಿದ್ದುಪಡಿಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

(1994ರ ವಿಧಾನಸಭಾ ವಿಧೇಯಕ ಸಂಖ್ಯೆ 5 ರಿಂದ ಪಡೆಯಲಾಗಿದೆ.)

## VIII

**1997ರ ತಿದ್ದುಪಡಿ ಮಾಡುವ ಅಧಿನಿಯಮ 12.-** ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 ಇದನ್ನು ಈ ಮುಂದಿನ ಉದ್ದೇಶಗಳಿಗಾಗಿ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.-

(i) ಲೈಸೆನ್ಸ್ ಪಡೆದ ವ್ಯವಹಾರಿಯನ್ನು ಅಧಿನಿಯಮದ ವ್ಯಾಪ್ತಿಯೊಳಗೆ ತರುವುದಕ್ಕಾಗಿ ಲೈಸೆನ್ಸ್ ಪಡೆದ ವ್ಯಾಪಾರಿಗಳ ಪರಿಭಾಷೆಯನ್ನು ಸೇರಿಸುವುದು.

(ii) ಲೈಸೆನ್ಸ್ ಪಡೆದ ವ್ಯವಹಾರಿಗಳನ್ನು ಗೊತ್ತುಪಡಿಸಿದ ಪ್ರಮಾಣಕ್ಕಿಂತ ಹೆಚ್ಚಾಗಿ ಅವರು ಹೊಂದಿರುವ ರೇಷ್ಮೆ ನೂಲಿನ ಪ್ರಮಾಣದ ಬಗ್ಗೆ ಘೋಷಣೆಯನ್ನು ಸಲ್ಲಿಸುವಂತೆ ಅಗತ್ಯಪಡಿಸಬಹುದು.

(iii) ಲೈಸೆನ್ಸ್ ಪಡೆದ ವ್ಯವಹಾರಿಯು ರಾಜ್ಯದ ಹೊರಗಡೆಯಿಂದ ಖರೀದಿಸಿದ ಅಥವಾ ತಂದ ರೇಷ್ಮೆ ನೂಲನ್ನು ರೇಷ್ಮೆ ವಿನಿಮಯ ಕೇಂದ್ರಗಳಲ್ಲಿ ಮಾತ್ರವೇ ಮಾರಾಟ ಮಾಡುವಂತೆ ಅಥವಾ ಮಾರಾಟ ಮಾಡಲು ಒಪ್ಪಿಕೊಳ್ಳುವಂತೆ ಕಡ್ಡಾಯಗೊಳಿಸುವುದು.

(iv) 12, 12ಬಿ ಮತ್ತು 13ನೇ ಪ್ರಕರಣದ ಮೇರೆಗೆ ವಿಧಿಸುವ ದಂಡವನ್ನು ಹೆಚ್ಚಿಸುವುದು.

ಈ ವಿಷಯವು ತುಂಬಾ ತುರ್ತಿನದಾಗಿದ್ದುದರಿಂದ ಮತ್ತು ರಾಜ್ಯ ವಿಧಾನ ಮಂಡಲವು ಅಧಿವೇಶನದಲ್ಲಿ ಇದ್ದಿಲ್ಲವಾದ್ದರಿಂದ, ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) (ತಿದ್ದುಪಡಿ) ಅಧ್ಯಾದೇಶ, 1996 (1997ರ ಕರ್ನಾಟಕ ಅಧ್ಯಾದೇಶ ಸಂಖ್ಯೆ.1) ಇದನ್ನು ಹೊರಡಿಸಲಾಗಿತ್ತು. ಈ ವಿಧೇಯಕವನ್ನು ಸದರಿ ಅಧ್ಯಾದೇಶಕ್ಕೆ ಬದಲಾಗಿ ಮಂಡಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕಡತ ಡಿಪಿಎಎಲ್ 1 ಶಾಸನ 97 ರಿಂದ ಪಡೆಯಲಾಗಿದೆ).

## IX

**2000ದ ತಿದ್ದುಪಡಿ ಮಾಡುವ ಅಧಿನಿಯಮ 22.-** ಈ ಅಧಿನಿಯಮದ ಮೂಲಕ ಕೆಲವು ಅಪ್ರಸ್ತುತವಾದ ಮತ್ತು ಚಾಲ್ತಿಯಲ್ಲಿಲ್ಲದ ಕಾನೂನುಗಳನ್ನು ನಿರಸನಗೊಳಿಸಲಾಗಿದೆ ಮತ್ತು 1960ರ ಅಧಿನಿಯಮ 5ಕ್ಕೆ ಮತ್ತು ಕೆಲವು ಇತರ ಕಾನೂನುಗಳಿಗೆ ಕೆಲವು ಚಿಕ್ಕಪುಟ್ಟ ಪ್ರಾಸಂಗಿಕ ತಿದ್ದುಪಡಿಗಳನ್ನು ಮಾಡಲಾಯಿತು.

# 1960ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 5

(1960ರ ಫೆಬ್ರವರಿ ಇಪ್ಪತ್ತೈದನೆಯ ದಿನದಂದು [1][ಕರ್ನಾಟಕ ರಾಜ್ಯಪತ್ರ][1] ದಲ್ಲಿ ಮೊದಲು ಪ್ರಕಟವಾಗಿದೆ.)

[1][ಕರ್ನಾಟಕ][1] ರೇಷ್ಮೆ ಹುಳು ಬಿತ್ತನೆ, [2][ರೇಷ್ಮೆಗೂಡು ಮತ್ತು ರೇಷ್ಮೆ ನೂಲು][2] (ಉತ್ಪಾದನೆ, ಸರಬರಾಜು, [2][ವಿತರಣೆ ಮತ್ತು ಮಾರಾಟ][2] ವಿನಿಯಮನ) ಅಧಿನಿಯಮ, 1959

(1960ರ ಫೆಬ್ರವರಿ ಹನ್ನೆರಡನೆಯ ದಿನದಂದು ರಾಷ್ಟ್ರಪತಿಯವರ ಸಮ್ಮತಿಯನ್ನು ಪಡೆದಿದೆ.)

(1969ರ 29, 1979ರ 33, 1980ರ 12, 1981ರ 6, 1984ರ 20, 1994ರ 30, 1997ರ 12 ಮತ್ತು 2000ರ 22 ಈ ಅಧಿನಿಯಮಗಳ ಮೂಲಕ ತಿದ್ದುಪಡಿಯಾದಂತೆ).

[1][ಕರ್ನಾಟಕ ರಾಜ್ಯ][1] ದಲ್ಲಿ ರೇಷ್ಮೆಹುಳು ಬಿತ್ತನೆ, [2][ರೇಷ್ಮೆಗೂಡು ಮತ್ತು ರೇಷ್ಮೆನೂಲಿ][2]ನ ಉತ್ಪಾದನೆ, ಸರಬರಾಜು, [2][ವಿತರಣೆ ಮತ್ತು ಮಾರಾಟ][2] ದ ವಿನಿಯಮನಕ್ಕಾಗಿ ಉಪಬಂಧ ಕಲ್ಪಿಸುವ ಕಾನೂನುಗಳನ್ನು ಕ್ರೋಢೀಕರಿಸುವ ಅಧಿನಿಯಮ.

[1][ಕರ್ನಾಟಕ ರಾಜ್ಯ][1]ದಲ್ಲಿ ರೇಷ್ಮೆಹುಳು ಬಿತ್ತನೆ, [2][ರೇಷ್ಮೆಗೂಡು ಮತ್ತು ರೇಷ್ಮೆನೂಲಿ][2]ನ ಉತ್ಪಾದನೆ, ಸರಬರಾಜು, [2][ವಿತರಣೆ ಮತ್ತು ಮಾರಾಟ][2] ದ ವಿನಿಯಮನಕ್ಕಾಗಿ ಉಪಬಂಧ ಕಲ್ಪಿಸುವ ಕಾನೂನುಗಳನ್ನು ಕ್ರೋಢೀಕರಿಸುವುದು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಹತ್ತನೆಯ ವರ್ಷದಲ್ಲಿ [[1][ಕರ್ನಾಟಕ][1] ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು.-

1. **ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು [1][ಕರ್ನಾಟಕ][1] ರೇಷ್ಮೆಹುಳು ಬಿತ್ತನೆ, [2][ರೇಷ್ಮೆಗೂಡು ಮತ್ತು ರೇಷ್ಮೆನೂಲು][2] (ಉತ್ಪಾದನೆ, ಸರಬರಾಜು, [2][ವಿತರಣೆ ಮತ್ತು ಮಾರಾಟ][2] ದ ವಿನಿಯಮನ) ಅಧಿನಿಯಮ, 1959 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ ರಾಜ್ಯ][1] ಕ್ಕೆ ವ್ಯಾಪ್ತವಾಗುತ್ತದೆ.

(3) ಈ ಅಧಿನಿಯಮದ [3][10 ಮತ್ತು 19ನೇ ಪ್ರಕರಣವು][3] ಇಡೀ [1][ಕರ್ನಾಟಕ ರಾಜ್ಯ][1] ದಲ್ಲಿ ಈ ಕೂಡಲೇ ಜಾರಿಗೆ ಬರತಕ್ಕದ್ದು ಮತ್ತು ಈ ಅಧಿನಿಯಮದ ಉಳಿದ ಭಾಗವು, 1952ರ ಮೈಸೂರು ರೇಷ್ಮೆಹುಳು ಬಿತ್ತನೆ (ವಿತರಣೆಯ ನಿಯಂತ್ರಣ) ಅಧಿನಿಯಮವು ಜಾರಿಯಲ್ಲಿರುವಂಥ ರಾಜ್ಯದ ಪ್ರದೇಶಗಳಲ್ಲಿ ಈ ಕೂಡಲೇ ಜಾರಿಗೆ ಬರತಕ್ಕದ್ದು. ಈ ಅಧಿನಿಯಮದ ([3][10 ಮತ್ತು 19ನೇ ಪ್ರಕರಣದ][3] ಹೊರತು) ಎಲ್ಲಾ ಅಥವಾ ಯಾವುವೇ ಉಪಬಂಧಗಳು, ಸರ್ಕಾರವು, ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸ ಬಹುದಾದಂಥ [4][ದಿನಾಂಕದಂದು ಅಥವಾ ದಿನಾಂಕಗಳಂದು][4] ರಾಜ್ಯದ ಅಂಥ ಇತರ ಪ್ರದೇಶದಲ್ಲಿ ಅಥವಾ ಪ್ರದೇಶಗಳಲ್ಲಿ ಜಾರಿಗೆ ಬರತಕ್ಕದ್ದು.

2. **ಪರಿಭಾಷೆಗಳು.-** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ರೇಷ್ಮೆಗೂಡು" ಎಂದರೆ, ಹಸಿರುಗೂಡು ಅಥವಾ ಹಬೆ ಮಾಡಿದ ಗೂಡು, ಒಣಗಿದ ಗೂಡು ಅಥವಾ ಇತರ ಯಾವುದೇ ಸ್ಥಿತಿಯಲ್ಲಿ ಅಥವಾ ಅವಸ್ಥೆಯಲ್ಲಿರುವ [5][ಹಿಪ್ಪು ನೇರಳೆ, ಟಸ್ಸಾರ್, ಮುಗಾ ಮತ್ತು ಎರಿ ರೇಷ್ಮೆ ಹುಳು][5] ಗಳಿಂದ ಉತ್ಪಾದಿಸಲಾದ ಗೂಡು, ಆದರೆ, ಅದರಲ್ಲಿ ರಂಧ್ರವಾಗಿರುವ ಗೂಡುಗಳು ಒಳಗೊಳ್ಳತಕ್ಕದ್ದಲ್ಲ ;

**ವಿವರಣೆ.-** ಈ ಖಂಡದಲ್ಲಿ "ರಂಧ್ರವಾಗಿರುವ ಗೂಡು" ಎಂದರೆ, ಪತಂಗವು ಗೂಡನ್ನು ರಂಧ್ರಮಾಡಿ ಅದರ ಮೂಲಕ ಹೊರಕ್ಕೆ ಹೋಗಿರುವ ಗೂಡು.

(ಬಿ) "ರೇಷ್ಮೆ ಗೂಡಿನ ಮಾರುಕಟ್ಟೆ" ಎಂದರೆ, ರೇಷ್ಮೆ ನೂಲು ತೆಗೆಯುವುದಕ್ಕಾಗಿ ಉಪಯೋಗಿಸಲು ಉದ್ದೇಶಿಸಿದ ಎಲ್ಲಾ ಬಗೆಯ ರೇಷ್ಮೆ ಗೂಡುಗಳ ಮಾರಾಟಕ್ಕಾಗಿ ಅಥವಾ ಖರೀದಿಗಾಗಿ 10ನೆಯ ಪ್ರಕರಣದ ಮೇರೆಗೆ ಸ್ಥಾಪಿಸಲಾದ ಮಾರುಕಟ್ಟೆ ;

(ಸಿ) "ಮಿಶ್ರ ತಳಿಗೂಡುಗಳು" ಎಂದರೆ, ಎರಡು ಭಿನ್ನ ತಳಿಯ ರೇಷ್ಮೆ ಹುಳುಗಳ ಸಂಕರದಿಂದ ಉತ್ಪಾದಿಸಲಾದ ಮೊಟ್ಟೆಗಳಿಂದ ಪಡೆದ ಹುಳುಗಳನ್ನು ಸಾಕಿ ಉತ್ಪಾದಿಸಿದ ರೇಷ್ಮೆ ಗೂಡುಗಳು;

---

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. 1979ರ ಅಧಿನಿಯಮ ಸಂಖ್ಯೆ 33ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 2000ದ ಅಧಿನಿಯಮ ಸಂಖ್ಯೆ 22ರ ಮೂಲಕ 25.02.1960 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. ಅಧಿನಿಯಮದ ಬೇರೆ ಬೇರೆ ಉಪಬಂಧಗಳು ರಾಜ್ಯದ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ದಿನಾಂಕಗಳಂದು ಜಾರಿಗೆ ಬಂದಿವೆ. ಅಧಿಸೂಚನೆಗಳ ಪಾಠವು 2 ರಿಂದ 16ನೇ ಪುಟಗಳಲ್ಲಿವೆ.
5. 1997ರ ಅಧಿನಿಯಮ ಸಂಖ್ಯೆ 12ರ ಮೂಲಕ 6.1.1997ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ಸಿಎ) "ಡ್ಯುಪಿಯಾನ್ ರೇಷ್ಮೆ ನೂಲು" ಎಂದರೆ, ಜೋಡಿ ಗೂಡುಗಳಿಂದ [2][ಅಥವಾ ಕೀಳುಮಟ್ಟದ ಗೂಡುಗಳಿಂದ][2] ಎಳೆ ತೆಗೆದು ನೂತ ರೇಷ್ಮೆ ನೂಲು;][1]

[2][(ಸಿಬಿ) "ಬಣ್ಣಗಾರ" (ಡೈಯರ್) ಎಂದರೆ, ರೇಷ್ಮೆ ನೂಲಿಗೆ ಬಣ್ಣ ಹಾಕುವ ಸಂಸ್ಥೆಯ ಪ್ರಭಾರವನ್ನು ಹೊಂದಿರುವ ವ್ಯಕ್ತಿ ;][2]

(ಡಿ) "ಸರ್ಕಾರ" ಎಂದರೆ, ರಾಜ್ಯ ಸರ್ಕಾರ;

[3][(ಇ) "ಲೈಸೆನ್ಸು ನೀಡುವ ಪ್ರಾಧಿಕಾರ" ಎಂದರೆ, ಕರ್ನಾಟಕ ರೇಷ್ಮೆ ಕೃಷಿ ನಿರ್ದೇಶಕರು ಅಧಿಸೂಚನೆಯ ಮೂಲಕ ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಪ್ರದೇಶಗಳು ಮತ್ತು ಉದ್ದೇಶಗಳಿಗಾಗಿ ನೇಮಕ ಮಾಡಿದ ಅಧಿಕಾರಿ;][3]

[4][(ಇಇ) "ಲೈಸೆನ್ಸ್ ಹೊಂದಿರುವ ಡೀಲರ್" ಎಂದರೆ ರಾಜ್ಯದ ಹೊರಗಿನಿಂದ ತಂದ ಅಥವಾ ರೇಷ್ಮೆ ವಿನಿಮಯ ಕೇಂದ್ರದಿಂದ ಅಥವಾ ಲೈಸೆನ್ಸ್ ಹೊಂದಿರುವ ವ್ಯಾಪಾರಿಯಿಂದ ಅಥವಾ ಲೈಸೆನ್ಸ್ ಹೊಂದಿರುವ ಇತರ ಯಾರೇ ಡೀಲರ್‌ನಿಂದ ಖರೀದಿಸಿದ ರೇಷ್ಮೆ ನೂಲನ್ನು ಕೊಳ್ಳುವ ಮತ್ತು ಮಾರಾಟ ಮಾಡುವ ವ್ಯವಹಾರಗಳನ್ನು ನಡೆಸುತ್ತಿರುವ ವ್ಯಕ್ತಿ ;][4]

[5][(ಎಫ್) "ಲೈಸೆನ್ಸ್ ಪಡೆದಿರುವ ವ್ಯಾಪಾರಿ" ಎಂದರೆ, ರೇಷ್ಮೆ ವಿನಿಮಯ ಕೇಂದ್ರದಲ್ಲಿ ರೇಷ್ಮೆ ನೂಲು ಖರೀದಿಸಲು ಲೈಸೆನ್ಸ್ ಪಡೆದಿರುವಂತಹ ಒಬ್ಬ ವ್ಯಕ್ತಿ;][5]

(ಜಿ) "ಅಧಿಸೂಚನೆ" ಎಂದರೆ ರಾಜಪತ್ರದಲ್ಲಿ ಪ್ರಕಟವಾದ ಅಧಿಸೂಚನೆ;

(ಹೆಚ್) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಮೇರೆಗೆ ರಚಿಸಲಾದ ನಿಯಮಗಳ ಮೂಲಕ ನಿಯಮಿಸಲಾದುದು;

(ಐ) "ಸಾಕಣೆದಾರ" ಎಂದರೆ, ಪುನರುತ್ಪಾದನೆಗಾಗಿ ಅಥವಾ ರೇಷ್ಮೆ ನೂಲು ತೆಗೆಯುವುದಕ್ಕಾಗಿ ರೇಷ್ಮೆ ಗೂಡುಗಳನ್ನು ಉತ್ಪಾದಿಸಲು ರೇಷ್ಮೆ ಹುಳುಗಳ ಸಾಕಣೆಯಲ್ಲಿ ನಿರತನಾದ ವ್ಯಕ್ತಿ;

**ವಿವರಣೆ:-** ಈ ಖಂಡದಲ್ಲಿ "ಸಾಕಣೆ" ಎಂಬುದು ರೇಷ್ಮೆ ಮೊಟ್ಟೆಗಳನ್ನು ಮರಿ ಮಾಡುವುದು ಮತ್ತು ಚೌಕಿ ಕಟ್ಟುವುದರಿಂದ ಹಿಡಿದು ಗೂಡುಗಳನ್ನು ಸಂಗ್ರಹಿಸುವವರೆಗಿನ ಎಲ್ಲ ಕೆಲಸಗಳನ್ನು ಒಳಗೊಳ್ಳುತ್ತದೆ;

[1][(ಐಎ) "ನೂಲು ಬಿಚ್ಚುವವ (ರೀಲರ್)" ಎಂದರೆ, ಗೂಡುಗಳಿಂದ ನೂಲು ಬಿಚ್ಚುವ ವ್ಯವಹಾರ ನಡೆಸುತ್ತಿರುವ ಮತ್ತು ನೂಲು ಬಿಚ್ಚುವ ಸಂಸ್ಥೆಯ ಪ್ರಭಾರ ಹೊಂದಿರುವ ಒಬ್ಬ ವ್ಯಕ್ತಿ;

**ವಿವರಣೆ.-** ಈ ಖಂಡದಲ್ಲಿ,-

(ಎ) "ರೇಷ್ಮೆ ನೂಲು ತೆಗೆಯುವ ಸಂಸ್ಥೆ" ಎಂದರೆ, ವಿದ್ಯುತ್ ಬಳಸಿ ಅಥವಾ ವಿದ್ಯುತ್ ಬಳಸದೆ ಚಾಲನೆ ಮಾಡಲಾದ ಯಾವುದೇ ಯಂತ್ರದ ಅಥವಾ ಯಾವುದೇ ಬಗೆಯ ಸಾಧನದ ನೆರವಿನಿಂದ ರೇಷ್ಮೆ ಗೂಡುಗಳ ಮೂಲಕ ರೇಷ್ಮೆ ನೂಲು ತೆಗೆಯುವ ಸಂಸ್ಥೆ;

(ಬಿ) "ವಿದ್ಯುತ್" ಎಂದರೆ, ಯಂತ್ರ ಮುಖೇನ ಸಂವಹಿಸುವ ಮತ್ತು ಮನುಷ್ಯನ ಅಥವಾ ಪ್ರಾಣಿಯ ಮೂಲಕ ಉತ್ಪಾದಿತವಾಗಿರದ ಯಾವುದೇ ಸ್ವರೂಪದ ಶಕ್ತಿ ಮತ್ತು ಇದು ವಿದ್ಯುಚ್ಛಕ್ತಿಯನ್ನು ಸಹ ಒಳಗೊಳ್ಳುತ್ತದೆ;

(ಐಬಿ) "ರೇಷ್ಮೆ ವಿನಿಮಯ ಕೇಂದ್ರ" ಎಂದರೆ, ರೇಷ್ಮೆ ನೂಲಿನ ಮಾರಾಟ ಅಥವಾ ಖರೀದಿಗಾಗಿ 10ಎ ಪ್ರಕರಣದ ಮೇರೆಗೆ ಸ್ಥಾಪಿಸಲಾದ ರೇಷ್ಮೆ ವಿನಿಮಯ ಕೇಂದ್ರ ಮತ್ತು ಇದು ರೇಷ್ಮೆ ದಾಸ್ತಾನು ಮಳಿಗೆಗಳನ್ನು ಒಳಗೊಳ್ಳುತ್ತದೆ;][1]

[6][(ಜೆ) "ರೇಷ್ಮೆ ಹುಳು" ಎಂದರೆ, ಹಿಪ್ಪುನೇರಳೆ, ಟಸ್ಸಾರ್, ಮುಗಾ ಮತ್ತು ಎರಿ ರೇಷ್ಮೆ ಹುಳು;][6]

(ಕೆ) "ರೇಷ್ಮೆ ಹುಳು ಬಿತ್ತನೆ " ಎಂದರೆ, ರೇಷ್ಮೆ ಹುಳು ಮೊಟ್ಟೆಯ ಉತ್ಪಾದನೆಗೆ ಉಪಯೋಗಿಸಲಾದ ಎಲ್ಲಾ ಬಗೆಯ (ಮಿಶ್ರ ತಳಿಗೂಡುಗಳನ್ನು ಹೊರತುಪಡಿಸಿ) ರೇಷ್ಮೆ ಗೂಡುಗಳು ಮತ್ತು ಇದು ಪುನರುತ್ಪಾದನೆಯ ಉದ್ದೇಶಗಳಿಗಾಗಿ ಉಪಯೋಗಿಸಲು ಅಥವಾ ಸಾಕಲು ಉದ್ದೇಶಿಸಲಾದ ಯಾವುದೇ ವಿಧದ ಪತಂಗಗಳು, ಮೊಟ್ಟೆಗಳು ಮತ್ತು ರೇಷ್ಮೆ ಹುಳುಗಳನ್ನು ಒಳಗೊಳ್ಳುತ್ತದೆ;

[1][(ಎಲ್) "ರೇಷ್ಮೆ ನೂಲು" ಎಂದರೆ, ಗೂಡುಗಳಿಂದ ತೆಗೆದ ರೇಷ್ಮೆ ನೂಲು ಮತ್ತು ಇದರಲ್ಲಿ ಹುರಿ ರೇಷ್ಮೆ ನೂಲು, ಡ್ಯುಪಿಯಾನ್ ರೇಷ್ಮೆ ನೂಲು, ನೂತ ರೇಷ್ಮೆ ನೂಲು ಮತ್ತು ನೊಯಿಲ್ ರೇಷ್ಮೆ ನೂಲು ಇವು ಸೇರುತ್ತವೆ;

---

1. 1979ರ ಅಧಿನಿಯಮ ಸಂಖ್ಯೆ 33ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1994ರ ಅಧಿನಿಯಮ ಸಂಖ್ಯೆ 30ರ ಮೂಲಕ 03.10.1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1994ರ ಅಧಿನಿಯಮ ಸಂಖ್ಯೆ 30ರ ಮೂಲಕ 03.10.1994 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1997ರ ಅಧಿನಿಯಮ ಸಂಖ್ಯೆ 33ರ ಮೂಲಕ 06.01.1997 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
5. 1979ರ ಅಧಿನಿಯಮ ಸಂಖ್ಯೆ 33ರ ಮೂಲಕ 06.11.1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1997ರ ಅಧಿನಿಯಮ ಸಂಖ್ಯೆ 12ರ ಮೂಲಕ 6.1.1997 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**ವಿವರಣೆ.-** ಈ ಖಂಡದ ಉದ್ದೇಶಗಳಿಗಾಗಿ ನೊಯಿಲ್ ರೇಷ್ಮೆ ನೂಲು ಎಂದರೆ, ರೇಷ್ಮೆ ನೂಲು ತೆಗೆಯುವವನು ಎಕ್ಕಿ ತೆಗೆಯುವುದರಿಂದ ಉಂಟಾದ ಸಣ್ಣ ಕಚ್ಚಾ ಉಳಿಕೆಯ ರೇಷ್ಮೆ ನೊಯಿಲ್‌ನ ನೂತ ರೇಷ್ಮೆ ನೂಲು;][1]

(ಎಂ) "ನೂತ (ಸ್ಪನ್) ರೇಷ್ಮೆ ನೂಲು" ಎಂದರೆ, ಕೊರೆದಿರುವ ಅಥವಾ ಹಾಳಾಗಿರುವ ರೇಷ್ಮೆ ಗೂಡುಗಳು, ಗೂಡುಗಳ ಗುಂಜು, ರೇಷ್ಮೆ ಎಳೆ ತುಣುಕುಗಳು ಅಥವಾ ಇತರೆ ನಿರುಪಯುಕ್ತ ರೇಷ್ಮೆ- ಇವುಗಳಿಂದ ನೂತ ರೇಷ್ಮೆ ನೂಲು;

(ಎನ್) "ಹುರಿ ಮಾಡಿದ (ಟ್ವಿಸ್ಟೆಡ್) ರೇಷ್ಮೆ ನೂಲು" ಎಂದರೆ, ಎರಡು ಅಥವಾ ಹೆಚ್ಚು ರೇಷ್ಮೆ ನೂಲುಗಳನ್ನು ಸೇರಿಸಿ ಹುರಿ ಮಾಡಿದ ರೇಷ್ಮೆ ನೂಲು ಇದರಲ್ಲಿ ಹಾಸು ನೂಲುಗಳೂ ಸೇರುತ್ತವೆ ; ಮತ್ತು

(ಒ) "ಹುರಿಕಾರ" ಎಂದರೆ, ಹುರಿ ಮಾಡಿದ ರೇಷ್ಮೆ ತಯಾರಿಸುವ ಸಂಸ್ಥೆಯ ಪ್ರಭಾರವನ್ನು ಹೊಂದಿರುವ ಒಬ್ಬ ವ್ಯಕ್ತಿ ;][1]

[1][(ಪಿ) "ನೇಕಾರ" ಎಂದರೆ, ರೇಷ್ಮೆ ನೂಲನ್ನು ಉಪಯೋಗಿಸಿ ಬಟ್ಟೆ ತಯಾರಿಸುವ ನೇಯ್ಗೆ ಉದ್ಯಮ ಸಂಸ್ಥೆಯ ಪ್ರಭಾರ ಹೊಂದಿರುವ ವ್ಯಕ್ತಿ.][1]

3. **ರೇಷ್ಮೆ ಮೊಟ್ಟೆಯ ಉತ್ಪಾದನೆ, ಇತ್ಯಾದಿಗಳ ವಿನಿಯಮನ:-** ಈ ಅಧಿನಿಯಮದ ಮೇರೆಗೆ ಮಂಜೂರಾದ ಲೈಸೆನ್ಸಿನ ನಿಬಂಧನೆಗಳ ಮತ್ತು ಷರತ್ತುಗಳ ಮೇರೆಗೆ ಮತ್ತು ಅವುಗಳಿಗೆ ಅನುಸಾರವಾಗಿ ಹೊರತು, ಯಾವನೇ ವ್ಯಕ್ತಿಯು ರೇಷ್ಮೆ ಮೊಟ್ಟೆಯ ಉತ್ಪಾದನೆ, ತಯಾರಿಕೆ, ದಾಸ್ತಾನು, ಸಾಗಣೆ ಅಥವಾ ಮಾರಾಟ ಮಾಡತಕ್ಕದ್ದಲ್ಲ ಅಥವಾ ಅದನ್ನು ಬೇರೆ ರೀತಿಯಲ್ಲಿ ವಿತರಿಸತಕ್ಕದ್ದಲ್ಲ ಅಥವಾ ವಿಲೆ ಮಾಡತಕ್ಕದ್ದಲ್ಲ.

4. **ಸಾಕಣೆಯ ವಿನಿಯಮನ.-** [2][(1) ಈ ಅಧಿನಿಯಮದ ಮೇರೆಗೆ ಮಂಜೂರಾದ ಲೈಸೆನ್ಸಿನ ನಿಬಂಧನೆಗಳು ಮತ್ತು ಷರತ್ತುಗಳ ಮೇರೆಗೆ ಮತ್ತು ಅವುಗಳ ಅನುಸಾರವಾಗಿ ಹೊರತು, ಯಾವನೇ ವ್ಯಕ್ತಿಯು, ರೇಷ್ಮೆ ಗೂಡುಗಳ ಉತ್ಪಾದನೆಗಾಗಿ ರೇಷ್ಮೆ ಹುಳುಗಳನ್ನು ಸಾಕುವುದರಲ್ಲಿ ನಿರತನಾಗಿರತಕ್ಕದ್ದಲ್ಲ.][2]

(2) ಸರ್ಕಾರವು, ಯಾವುದೇ ನಿರ್ದಿಷ್ಟಪಡಿಸಿದ ಪ್ರದೇಶದಲ್ಲಿ, ನಿರ್ದಿಷ್ಟಪಡಿಸಿದ ತಳಿಯ ರೇಷ್ಮೆ ಹುಳುಗಳ ಹೊರತು ಬೇರೆ ರೇಷ್ಮೆ ಹುಳುಗಳನ್ನು ಸಾಕತಕ್ಕದ್ದಲ್ಲ ಮತ್ತು ಅಂಥ ರೇಷ್ಮೆ ಹುಳುಗಳನ್ನು ನಿರ್ದಿಷ್ಟಪಡಿಸಿದ ನೂಲುಗಳಿಂದ ಪಡೆದ ರೇಷ್ಮೆ ಬಿತ್ತನೆಗಳಿಂದ ಸಾಕತಕ್ಕದ್ದು ಎಂದು ಅಧಿಸೂಚನೆಯ ಮೂಲಕ ನಿರ್ದೇಶಿಸಬಹುದು. ಅಂಥ ಅಧಿಸೂಚನೆಯನ್ನು ಹೊರಡಿಸಿದ ಮೇಲೆ, ಯಾವನೇ ವ್ಯಕ್ತಿಯು ಅಂಥ ನಿರ್ದಿಷ್ಟಪಡಿಸಿದ ಪ್ರದೇಶದಲ್ಲಿ ಬೇರೆ ಯಾವುದೇ ರೇಷ್ಮೆ ಹುಳುವಿನ ತಳಿಯನ್ನು ಸಾಕತಕ್ಕದ್ದಲ್ಲ ಅಥವಾ ಬೇರೆ ಯಾವುದೇ ಮೂಲಗಳಿಂದ ರೇಷ್ಮೆ ಹುಳು ಬಿತ್ತನೆಯನ್ನು ಪಡೆಯತಕ್ಕದ್ದಲ್ಲ.

5. **ರೇಷ್ಮೆ ಮೊಟ್ಟೆಯ ಸ್ವಾಧೀನತೆಯ ವಿನಿಯಮನ.-** ಯಾವನೇ ವ್ಯಕ್ತಿಯು,-

(ಎ) ರೇಷ್ಮೆ ಹುಳು ಸಾಕಣೆದಾರನಾಗಿದ್ದ ಹೊರತು; ಅಥವಾ

(ಬಿ) ಈ ಅಧಿನಿಯಮದ ಮೇರೆಗೆ ಮಂಜೂರಾದ ಲೈಸೆನ್ಸನ್ನು ಹೊಂದಿದ್ದ ಹೊರತು; ಅಥವಾ

(ಸಿ) ರೇಷ್ಮೆ ಹುಳು ಬಿತ್ತನೆಯನ್ನು ಸ್ವಾಧೀನದಲ್ಲಿ ಇಟ್ಟುಕೊಂಡಿರಲು ನಿಯಮಿಸಿದ ಅಧಿಕಾರಿಯಿಂದ ಲಿಖಿತದಲ್ಲಿ ಅಧಿಕೃತನಾಗಿದ್ದ ಹೊರತು

-ಅವನು, ರೇಷ್ಮೆ ಹುಳು ಬಿತ್ತನೆಯ ಸ್ವಾಧೀನತೆಯನ್ನು ಹೊಂದಿರತಕ್ಕದ್ದಲ್ಲ.

[3][5ಎ. **ರೇಷ್ಮೆ ನೂಲಿನ ಸ್ವಾಧೀನತೆಯ ವಿನಿಯಮನ.-** [4][(1)][4] ಯಾರೇ ವ್ಯಕ್ತಿಯು,-

(ಎ) ನೂಲು ಬಿಚ್ಚುವವ;

(ಬಿ) ಒಬ್ಬ ಲೈಸೆನ್ಸ್ ಹೊಂದಿರುವ ವ್ಯಾಪಾರಿ;

[5][(ಬಿಬಿ) ಲೈಸೆನ್ಸ್ ಹೊಂದಿರುವ ಡೀಲರ್;][5]

(ಸಿ) ಒಬ್ಬ ಹುರಿಕಾರ;

[1][(ಸಿ1) ಒಬ್ಬ ಬಣ್ಣಗಾರ; ][1]

---

1. 1994ರ ಅಧಿನಿಯಮ ಸಂಖ್ಯೆ 30ರ ಮೂಲಕ 03.10.1994 ರಿಂದ ಜಾರಿಗೆ ಬರುವಂತೆ ವಿವರಣೆಯನ್ನು ಸೇರಿಸಲಾಗಿದೆ.
2. 1969ರ ಅಧಿನಿಯಮ ಸಂಖ್ಯೆ 29ರ ಮೂಲಕ 22.12.1969 ರಿಂದ ಜಾರಿಗೆ ಬರುವಂತೆ ಅಧಿಸೂಚನೆಯ ಮೂಲಕ ಪ್ರತಿಯೋಜಿಸಲಾಗಿದೆ. ಅಧಿಸೂಚನೆಯ ಪಾಠವು 15ನೇ ಪುಟದಲ್ಲಿದೆ.
3. 1979ರ ಅಧಿನಿಯಮ ಸಂಖ್ಯೆ 33ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1997ರ ಅಧಿನಿಯಮ ಸಂಖ್ಯೆ 12ರ ಮೂಲಕ 6.1.1997 ರಿಂದ ಜಾರಿಗೆ ಬರುವಂತೆ ಪುನರ್ ಅಂಕಿತಗೊಳಿಸಲಾಗಿದೆ.
5. 1997ರ ಅಧಿನಿಯಮ ಸಂಖ್ಯೆ 12ರ ಮೂಲಕ 6.1.1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಡಿ) ಒಬ್ಬ ನೇಕಾರ; ಅಥವಾ

(ಇ) ನಿಯಮಿಸಲಾದ ಅಧಿಕಾರಿಯ ಮೂಲಕ ಲಿಖಿತದಲ್ಲಿ ಅಧಿಕೃತನಾದ ವ್ಯಕ್ತಿ][3]

- ಆಗಿದ್ದ ಹೊರತು, ಅವನು ನಿಯಮದ ಪ್ರಮಾಣಕ್ಕಿಂತ ಹೆಚ್ಚಿನ ರೇಷ್ಮೆ ನೂಲನ್ನು ಹೊಂದಿರತಕ್ಕದ್ದಲ್ಲ.

[1][ವಿವಿಧ ವರ್ಗಗಳ ವ್ಯಕ್ತಿಗಳ ಸಂಬಂಧದಲ್ಲಿ ವಿವಿಧ ಪ್ರಮಾಣಗಳನ್ನು ನಿಯಮಿಸಬಹುದು.][1]

[1][(2) ನಿಯಮಿಸಲಾದ ಪ್ರಮಾಣಕ್ಕಿಂತ ಹೆಚ್ಚು ರೇಷ್ಮೆ ನೂಲು ಹೊಂದಿರುವಂಥ ಪ್ರತಿಯೊಬ್ಬ ಲೈಸೆನ್ಸ್ ಹೊಂದಿರುವ ಡೀಲರನು, ನಿಯಮಿಸಬಹುದಾದ ನಮೂನೆಯಲ್ಲಿ, ಅಂಥ ಅಧಿಕಾರಿಗೆ, ಅಂಥ ರೀತಿಯಲ್ಲಿ ಮತ್ತು ಮಧ್ಯಂತರಗಳಲ್ಲಿ ಗೊತ್ತುಪಡಿಸಬಹುದಾದಂತೆ ಒಂದು ಘೋಷಣೆಯನ್ನು ಸಲ್ಲಿಸತಕ್ಕದ್ದು.][1]

**6. ರೇಷ್ಮೆ ಗೂಡಿನ ವಿಲೆಯ ವಿನಿಯಮನ.-** ಯಾವ ರೇಷ್ಮೆ ಹುಳು ಸಾಕಣೆದಾರನೂ, ಈ ಅಧಿನಿಯಮದ ಮೇರೆಗೆ ಲೈಸೆನ್ಸನ್ನು ಹೊಂದಿರುವ ವ್ಯಕ್ತಿಗಳಿಗಲ್ಲದೆ ಇತರರಿಗೆ ರೇಷ್ಮೆ ಗೂಡುಗಳನ್ನು [2][XXXXX][2] ವಿಲೆ ಮಾಡತಕ್ಕದ್ದಲ್ಲ ಅಥವಾ ವಿಲೆ ಮಾಡುವುದಾಗಿ ಒಪ್ಪಿಕೊಳ್ಳತಕ್ಕದ್ದಲ್ಲ ಅಥವಾ ಮಾಡಿಕೊಂಡ ಒಪ್ಪಂದದ ಅನುಸಾರ ವಶಾವಣೆ ಮಾಡತಕ್ಕದ್ದಲ್ಲ.

**[3][7. ನೂಲು ಬಿಚ್ಚುವುದಕ್ಕಾಗಿ ರೇಷ್ಮೆ ಗೂಡುಗಳ ಮಾರಾಟ ಅಥವಾ ಖರೀದಿಯ ವಿನಿಯಮನ.-** (1) ಈ ಅಧಿನಿಯಮದ ಮೇರೆಗೆ ರೇಷ್ಮೆ ಗೂಡಿನ ಮಾರುಕಟ್ಟೆಯನ್ನು ಸ್ಥಾಪಿಸಿರುವ ಯಾವುದೇ ಪ್ರದೇಶದಲ್ಲಿ, ಅಂಥ ರೇಷ್ಮೆ ಗೂಡಿನ ಮಾರುಕಟ್ಟೆಯಲ್ಲಿ ಹೊರತು ಮತ್ತು ನಿಯಮಿಸಬಹುದಾದಂಥ ಷರತ್ತುಗಳಿಗೆ ಅನುಸಾರವಾಗಿ ಮತ್ತು ಅಂಥ ರೀತಿಯಲ್ಲಿ ಹೊರತು, ರೇಷ್ಮೆಗೂಡುಗಳನ್ನು,-

(ಎ) ಯಾವ ರೇಷ್ಮೆ ಹುಳು ಸಾಕಣೆದಾರನೂ ಮಾರತಕ್ಕದ್ದಲ್ಲ ಅಥವಾ ಮಾರಾಟ ಮಾಡಲು ಒಪ್ಪಿಕೊಳ್ಳತಕ್ಕದ್ದಲ್ಲ; ಮತ್ತು

(ಬಿ) ಯಾವ ವ್ಯಕ್ತಿಯೂ ಖರೀದಿಸತಕ್ಕದ್ದಲ್ಲ ಅಥವಾ ಖರೀದಿಸಲು ಒಪ್ಪಿಕೊಳ್ಳತಕ್ಕದ್ದಲ್ಲ.

(2) ಯಾವುದೇ ಪ್ರದೇಶಕ್ಕಾಗಿ ರೇಷ್ಮೆಗೂಡಿನ ಮಾರುಕಟ್ಟೆಯನ್ನು ಸ್ಥಾಪಿಸಿದ ತರುವಾಯ, ಯಾವನೇ ವ್ಯಕ್ತಿಯು ಅಂಥ ರೇಷ್ಮೆಗೂಡಿನ ಮಾರುಕಟ್ಟೆಯಲ್ಲಿ ಹೊರತು, ಅಂಥ ಪ್ರದೇಶದಲ್ಲಿ ರೇಷ್ಮೆ ಗೂಡುಗಳ ಮಾರಾಟಕ್ಕಾಗಿ ಅಥವಾ ಖರೀದಿಗಾಗಿ ಯಾವುದೇ ಕಟ್ಟಡ, ಕೊಠಡಿ, ಡೇರೆ, ಆವರಣ, ವಾಹನ, ನೌಕೆ ಅಥವಾ ಸ್ಥಳವನ್ನು ಉಪಯೋಗಿಸತಕ್ಕದ್ದಲ್ಲ ಅಥವಾ ಉಪಯೋಗಿಸಲು ಅನುಮತಿಸತಕ್ಕದ್ದಲ್ಲ ಅಥವಾ ಉಪಯೋಗಿಸಲು ಸಹಾಯ ಮಾಡತಕ್ಕದ್ದಲ್ಲ ಅಥವಾ ರೇಷ್ಮೆ ಗೂಡುಗಳ ಮಾರಾಟಕ್ಕೆ ಅಥವಾ ಖರೀದಿಗೆ ಯಾವುದೇ ರೀತಿಯಲ್ಲಿ ನೆರವು ಕೊಡತಕ್ಕದ್ದಲ್ಲ ಅಥವಾ ದುಷ್ಪ್ರೇರಿಸತಕ್ಕದ್ದಲ್ಲ.][3]

**8. ನೂಲು ಬಿಚ್ಚುವುದನ್ನು ವಿನಿಯಮಿಸುವುದು.-** ಯಾವ ವ್ಯಕ್ತಿಯೂ, ಈ ಅಧಿನಿಯಮದ ಮೇರೆಗೆ ಮಂಜೂರಾದ ಲೈಸೆನ್ಸನ್ನು ಹೊಂದಿದ್ದ ಹೊರತು, ರೇಷ್ಮೆ ಗೂಡುಗಳಿಂದ ನೂಲು ಬಿಚ್ಚುವ ವ್ಯವಹಾರವನ್ನು ನಡೆಸತಕ್ಕದ್ದಲ್ಲ.

**[4][8ಎ. ರೇಷ್ಮೆ ನೂಲು, ಇತ್ಯಾದಿಗಳ ಮಾರಾಟ ಮತ್ತು ಖರೀದಿಯ ವಿನಿಯಮನ.-** 10ಎ ಪ್ರಕರಣದ ಮೇರೆಗೆ ಒಂದು ರೇಷ್ಮೆ ವಿನಿಮಯ ಕೇಂದ್ರವನ್ನು ಸ್ಥಾಪಿಸಿದ ತರುವಾಯ,-

(1) (ಎ) ನೂಲು ಬಿಚ್ಚುವ ಯಾವ ವ್ಯಕ್ತಿಯೂ [5][ಅಥವಾ ಹುರಿಕಾರನೂ ಆಗಿರುವ ನೂಲು ಬಿಚ್ಚುವ][5] ಯಾವ ವ್ಯಕ್ತಿಯೂ ಸಂದರ್ಭಾನುಸಾರ [5][ತಾನು ಬಿಚ್ಚಿದ ಅಥವಾ ಬಿಚ್ಚಿ ಹುರಿ ಮಾಡಿದ][5] ರೇಷ್ಮೆ ನೂಲನ್ನು ಮಾರಾಟ ಮಾಡತಕ್ಕದ್ದಲ್ಲ ಅಥವಾ ಮಾರಾಟ ಮಾಡಲು ಒಪ್ಪಿಕೊಳ್ಳತಕ್ಕದ್ದಲ್ಲ;

[5][(ಬಿ) ಯಾವ ವ್ಯಕ್ತಿಯೂ, ಆತನು ಲೈಸೆನ್ಸು ಪಡೆದ ಮಾರಾಟಗಾರನಾಗಿರಲಿ, ಇಲ್ಲದಿರಲಿ, ರೇಷ್ಮೆ ವಿನಿಮಯ ಕೇಂದ್ರವಲ್ಲದೆ ಇನ್ನೆಲ್ಲೂ ಮತ್ತು ನಿಯಮಿಸಬಹುದಾದಂಥ ಷರತ್ತುಗಳು ಮತ್ತು ವಿಧಾನಕ್ಕೆ ಅನುಸಾರವಾಗಿಯಲ್ಲದೆ ಒಬ್ಬ ನೂಲು ಬಿಚ್ಚುವ ವ್ಯಕ್ತಿಯಿಂದ ಅಥವಾ ನೂಲು ಬಿಚ್ಚುವವನೂ ಹುರಿಕಾರನೂ ಆಗಿರುವ ವ್ಯಕ್ತಿಯಿಂದ ರೇಷ್ಮೆ ನೂಲನ್ನು ಖರೀದಿಸತಕ್ಕದ್ದಲ್ಲ ಅಥವಾ ಖರೀದಿ ಮಾಡಲು ಒಪ್ಪಿಕೊಳ್ಳತಕ್ಕದ್ದಲ್ಲ;][5]

[1][(ಬಿಬಿ) ಲೈಸೆನ್ಸ್ ಹೊಂದಿರುವ ಯಾರೇ ಡೀಲರ್‌ನು, ರಾಜ್ಯದ ಹೊರಗಿನಿಂದ ತಾನು ತಂದ ಅಥವಾ ತರುವಂತೆ ಮಾಡಿದ ಯಾವುದೇ ಮೂಲದ ರೇಷ್ಮೆ ನೂಲನ್ನು ಮಾರಾಟ ಮಾಡತಕ್ಕದ್ದಲ್ಲ ಅಥವಾ ಮಾರಾಟ ಮಾಡಲು ಒಪ್ಪಿಕೊಳ್ಳತಕ್ಕದ್ದಲ್ಲ.][1]

(2) ಯಾವ ವ್ಯಕ್ತಿಯೂ ರೇಷ್ಮೆ ವಿನಿಮಯ ಕೇಂದ್ರದಲ್ಲಿ ಹೊರತು, ನೂಲು ಬಿಚ್ಚುವವನಿಂದ [6][XXXXX][6] ರೇಷ್ಮೆ ನೂಲುಗಳ ಮಾರಾಟಕ್ಕಾಗಿ ಅಥವಾ ಖರೀದಿಗಾಗಿ ಯಾವುದೇ ಕಟ್ಟಡ, ಕೊಠಡಿ, ಡೇರೆ, ಆವರಣ, ವಾಹನ, ನೌಕೆ ಅಥವಾ ಸ್ಥಳವನ್ನು

1. 1997ರ ಅಧಿನಿಯಮ ಸಂಖ್ಯೆ 12ರ ಮೂಲಕ 6.1.1997 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1969ರ ಅಧಿನಿಯಮ ಸಂಖ್ಯೆ 29ರ ಮೂಲಕ 22.12.1969 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
3. 1969ರ ಅಧಿನಿಯಮ ಸಂಖ್ಯೆ 29ರ ಮೂಲಕ 22.12.1969ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1979ರ ಅಧಿನಿಯಮ ಸಂಖ್ಯೆ 33ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
5. 1980ರ ಅಧಿನಿಯಮ ಸಂಖ್ಯೆ 12ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1980ರ ಅಧಿನಿಯಮ ಸಂಖ್ಯೆ 12ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

ಉಪಯೋಗಿಸತಕ್ಕದ್ದಲ್ಲ ಅಥವಾ ಉಪಯೋಗಿಸಲು ಅನುಮತಿಸತಕ್ಕದ್ದಲ್ಲ ಅಥವಾ ಉಪಯೋಗಿಸಲು ಸಹಾಯ ಮಾಡತಕ್ಕದ್ದಲ್ಲ ಅಥವಾ ಇತರ ಯಾವುದೇ ರೀತಿಯಲ್ಲಿ ರೇಷ್ಮೆ ನೂಲುಗಳ ಮಾರಾಟಕ್ಕೆ ಅಥವಾ ಖರೀದಿಗೆ ನೆರವು ನೀಡತಕ್ಕದ್ದಲ್ಲ ಅಥವಾ ದುಷ್ಪ್ರೇರಿಸತಕ್ಕದ್ದಲ್ಲ.][4]

[1][(3) (1)ನೇ ಉಪ ಪ್ರಕರಣದಲ್ಲಿ ಇರುವುದಾವುದೂ,-

(i) ರಾಜ್ಯದ ಹೊರಗಿನಿಂದ ತಂದ ಯಾವುದೇ ಮೂಲದ ರೇಷ್ಮೆ ನೂಲಿನ ಎರಡನೇ ಮತ್ತು ತರುವಾಯದ ಮಾರಾಟಕ್ಕೆ;

(ii) ಲೈಸೆನ್ಸ್ ಹೊಂದಿರುವ ಡೀಲರನು, ನೂರಕ್ಕೆ ನೂರರಷ್ಟು ರಫ್ತು ಆಧಾರಿತ ಘಟಕ ಹೊಂದಿದ್ದು, ರೇಷ್ಮೆ ಬಟ್ಟೆಗಳನ್ನು ತಯಾರಿಸಿ ಅವುಗಳನ್ನು ಭಾರತದಿಂದ ಹೊರಕ್ಕೆ ರಫ್ತು ಮಾಡುವ ಉದ್ದೇಶಕ್ಕಾಗಿ ಭಾರತದ ಹೊರಗಿನಿಂದ ರೇಷ್ಮೆ ನೂಲನ್ನು ಆಮದು ಮಾಡಿಕೊಂಡರೆ, ಅದಕ್ಕೆ

- ಅನ್ವಯಿಸತಕ್ಕದ್ದಲ್ಲ.

(4) ಯಾರೇ ವ್ಯಕ್ತಿಯು, ಈ ಅಧಿನಿಯಮದ ಮೇರೆಗೆ ಲೈಸೆನ್ಸ್ ಹೊಂದಿದ್ದ ಹೊರತು, ರಾಜ್ಯದ ಹೊರಗಿನಿಂದ ತಂದ ಅಥವಾ ರೇಷ್ಮೆ ವಿನಿಮಯ ಕೇಂದ್ರದಿಂದ ಅಥವಾ ಲೈಸೆನ್ಸ್ ಹೊಂದಿರುವ ವ್ಯಾಪಾರಿಯಿಂದ ಅಥವಾ ಇತರ ಯಾರೇ ಲೈಸೆನ್ಸ್ ಹೊಂದಿರುವ ಡೀಲರ್‌ನಿಂದ ರೇಷ್ಮೆ ನೂಲನ್ನು ಖರೀದಿಸುವ ಅಥವಾ ಮಾರಾಟ ಮಾಡುವ ವ್ಯವಹಾರಗಳನ್ನು ನಡೆಸತಕ್ಕದ್ದಲ್ಲ:

ಪರಂತು, ಈ ಉಪ-ಪ್ರಕರಣದ ಪ್ರಾರಂಭಕ್ಕೆ ನಿಕಟಪೂರ್ವದಲ್ಲಿ ಅಂಥ ವ್ಯವಹಾರ ನಡೆಸುತ್ತಿರುವ ವ್ಯಕ್ತಿಯು, ಅಂಥ ಪ್ರಾರಂಭದ ದಿನಾಂಕದಿಂದ ಮೂರು ತಿಂಗಳ ಅವಧಿಯವರೆಗೆ ಮತ್ತು ಆತನು ಮೂರು ತಿಂಗಳ ಸದರಿ ಅವಧಿಯೊಳಗಾಗಿ ಅಂಥ ಲೈಸೆನ್ಸಿಗಾಗಿ ಅರ್ಜಿಯನ್ನು ಸಲ್ಲಿಸಿದ್ದರೆ ಅಂಥ ಅರ್ಜಿಯು ವಿಲೆಯಾಗುವವರೆಗೆ, ಹಾಗೆ ಮಾಡುವುದನ್ನು ಮುಂದುವರೆಸಬಹುದು.][1]

9. **ಲೈಸೆನ್ಸಿಗಾಗಿ ಅರ್ಜಿ.-** ಈ ಅಧಿನಿಯಮದ ಮೇರೆಗೆ ಲೈಸೆನ್ಸನ್ನು ಪಡೆಯಲಿಚ್ಛಿಸುವ ಪ್ರತಿಯೊಬ್ಬ ವ್ಯಕ್ತಿಯೂ, ನಿಯಮಿಸಬಹುದಾದಂಥ ನಮೂನೆಯಲ್ಲಿ ಲೈಸೆನ್ಸು ನೀಡುವ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸತಕ್ಕದ್ದು.

10. **ರೇಷ್ಮೆ ಹುಳು ಬಿತ್ತನೆಯ ವಿನಿಯಮನ ಮತ್ತು ವಿತರಣೆ:-** (1) ಸರ್ಕಾರವು, ಕಾಲಕಾಲಕ್ಕೆ ಅಧಿಸೂಚನೆ ಮೂಲಕ,-

(ಎ) ರೇಷ್ಮೆಗೂಡು ಮಾರುಕಟ್ಟೆಗಳು, ರೇಷ್ಮೆಗೂಡಿನ ಮಾರುಕಟ್ಟೆ ಪ್ರಾಂಗಣಗಳು ಮತ್ತು ರೇಷ್ಮೆಗೂಡಿನ ಉಗ್ರಾಣಗಳು ಇರತಕ್ಕ ಸ್ಥಳಗಳನ್ನು ನಿರ್ದಿಷ್ಟಪಡಿಸಬಹುದು;

(ಬಿ) ಮಾರುಕಟ್ಟೆ ಅಧಿಕಾರಿಯನ್ನು [2][ರೇಷ್ಮೆಗೂಡು ಮಾರುಕಟ್ಟೆಯಲ್ಲಿ ಮಾರಾಟ ಮಾಡಿದ ಅಥವಾ ಖರೀದಿಸಿದ ರೇಷ್ಮೆಗೂಡುಗಳ ಸಂಬಂಧದಲ್ಲಿ ಈ ಅಧಿನಿಯಮದ ಮೇರೆಗೆ ಸಂದಾಯವಾಗತಕ್ಕ ಮಾರುಕಟ್ಟೆ ಶುಲ್ಕವನ್ನು ವಿಧಿಸಿ ವಸೂಲು ಮಾಡಲು][2] ನೇಮಕ ಮಾಡಬಹುದು ಮತ್ತು ರೇಷ್ಮೆಗೂಡಿನ ಮಾರುಕಟ್ಟೆಯಲ್ಲಿ ವ್ಯವಹಾರವನ್ನು ನಡೆಸುವ ವಿಧಾನವನ್ನು ಸಾಮಾನ್ಯವಾಗಿ ವಿನಿಯಮಿಸುವುದಕ್ಕಾಗಿ ಮತ್ತು ಸರ್ಕಾರವು ನಿರ್ಧರಿಸಬಹುದಾದಂಥ ಪ್ರಕಾರ್ಯಗಳನ್ನು ನೆರವೇರಿಸುವುದಕ್ಕಾಗಿ ಮಾರುಕಟ್ಟೆ ಅಧಿಕಾರಿಯು ಅಧ್ಯಕ್ಷನಾಗಿರತಕ್ಕ ಮತ್ತು ರೇಷ್ಮೆ ಹುಳು ಸಾಕಣೆದಾರರ ಇಬ್ಬರು ಪ್ರತಿನಿಧಿಗಳನ್ನು ಮತ್ತು [3][ನೂಲು ಬಿಚ್ಚುವವರ ಮೂವರು ಪ್ರತಿನಿಧಿಗಳನ್ನು][3] ಒಳಗೊಂಡ ಒಂದು ಸಮಿತಿಯನ್ನು ರಚಿಸಬಹುದು;

(ಸಿ) ರಾಜ್ಯದಲ್ಲಿರುವ ಯಾವ ರೇಷ್ಮೆ ಕೃಷಿ ಪ್ರದೇಶಗಳು ಪ್ರತಿಯೊಂದು ರೇಷ್ಮೆ ಬಿತ್ತನೆ ಮಾರುಕಟ್ಟೆಯ ಸೇವೆಯನ್ನು ಪಡೆಯತಕ್ಕದ್ದೋ ಮತ್ತು ಆ ಯಾವ ಪ್ರದೇಶಗಳಲ್ಲಿ ಉತ್ಪಾದನೆಯಾದಂಥ ರೇಷ್ಮೆ ಹುಳು ಬಿತ್ತನೆ ಬೀಜಗಳನ್ನು ಮಾರಾಟ ಮಾಡತಕ್ಕದ್ದೋ ಅಂಥ ಪ್ರದೇಶಗಳನ್ನು ನಿರ್ದಿಷ್ಟಪಡಿಸತಕ್ಕದ್ದು ;

(ಡಿ) ಲೈಸೆನ್ಸು ಪಡೆದ [3][ಯಾವನೇ ನೂಲು ಬಿಚ್ಚುವವನು][3] ತನ್ನ ವ್ಯವಹಾರಗಳನ್ನು ನಡೆಸಬಹುದಾದಂಥ ವಲಯಗಳನ್ನು ಮತ್ತು ಮಾರುಕಟ್ಟೆಗಳನ್ನು ಗೊತ್ತುಪಡಿಸಬಹುದು.

(2) ರೇಷ್ಮೆಗೂಡಿನ ಮಾರುಕಟ್ಟೆಯಲ್ಲಿ ಗೂಡುಗಳ ಮಾರಾಟ ಅಥವಾ ಖರೀದಿಯನ್ನೊಳಗೊಂಡ ಎಲ್ಲಾ ವ್ಯವಹಾರಗಳನ್ನು ಬಹಿರಂಗ ಹರಾಜಿನ ಮೂಲಕ ನಡೆಸತಕ್ಕದ್ದು, ಮಾರಾಟದ ಬೆಲೆಯು ನಗದು ರೂಪದಲ್ಲಿ ಸಂದಾಯವಾಗತಕ್ಕದ್ದು ಮತ್ತು ಗೂಡುಗಳನ್ನು

1. 1997ರ ಅಧಿನಿಯಮ ಸಂಖ್ಯೆ 12ರ ಮೂಲಕ 6.1.1997 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1981ರ ಅಧಿನಿಯಮ ಸಂಖ್ಯೆ 6ರ ಮೂಲಕ 25.2.1960 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1979ರ ಅಧಿನಿಯಮ ಸಂಖ್ಯೆ 33ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][ಕರ್ನಾಟಕ][1] ತೂಕ ಮತ್ತು ಅಳತೆಗಳ (ಜಾರಿ) ಅಧಿನಿಯಮ, 1958ರ ಮೂಲಕ ಅಥವಾ ಮೇರೆಗೆ ಅಗತ್ಯಪಡಿಸಲಾದಂತೆ ತೂಕದ ಮೂಲಕ ಮಾರಾಟ ಮಾಡತಕ್ಕದ್ದು.

[2][**10ಎ. ರೇಷ್ಮೆ ವಿನಿಮಯ ಕೇಂದ್ರದ ಸ್ಥಾಪನೆ.-** (1) ಸರ್ಕಾರವು ಅಧಿಸೂಚನೆ ಮೂಲಕ,-

(ಎ) ಯಾವ ಸ್ಥಳ ಅಥವಾ ಸ್ಥಳಗಳಲ್ಲಿ ರೇಷ್ಮೆ ವಿನಿಮಯ ಕೇಂದ್ರವನ್ನು ಸ್ಥಾಪಿಸತಕ್ಕದ್ದು ಎಂಬುದನ್ನು ನಿರ್ದಿಷ್ಟಪಡಿಸತಕ್ಕದ್ದು ;

(ಬಿ) ಪ್ರತಿ ರೇಷ್ಮೆ ವಿನಿಮಯ ಕೇಂದ್ರಕ್ಕೂ ಒಬ್ಬೊಬ್ಬ ರೇಷ್ಮೆ ಮಾರುಕಟ್ಟೆ ಅಧಿಕಾರಿಯನ್ನು [3][ರೇಷ್ಮೆ ವಿನಿಯಮ ಕೇಂದ್ರದಲ್ಲಿ ಮಾರಾಟ ಮಾಡಲಾದ ಅಥವಾ ಖರೀದಿಸಲಾದ ರೇಷ್ಮೆ ನೂಲಿನ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಮಾರುಕಟ್ಟೆ ಶುಲ್ಕವನ್ನು ವಿಧಿಸಿ ವಸೂಲು ಮಾಡಲು][3] ನೇಮಿಸತಕ್ಕದ್ದು ಮತ್ತು ರೇಷ್ಮೆ ವಿನಿಮಯ ಕೇಂದ್ರದ ವ್ಯವಹಾರವನ್ನು ನಡೆಸುವ ವಿಧಾನವನ್ನು ಸಾಮಾನ್ಯವಾಗಿ ವಿನಿಯಮಿಸುವುದಕ್ಕಾಗಿ ಮತ್ತು ಸರ್ಕಾರವು ನಿರ್ಧರಿಸಬಹುದಾದಂಥ ಪ್ರಕಾರ್ಯಗಳನ್ನು ನೆರವೇರಿಸುವುದಕ್ಕಾಗಿ ರೇಷ್ಮೆ ಮಾರುಕಟ್ಟೆ ಅಧಿಕಾರಿಯು ಅಧ್ಯಕ್ಷನಾಗಿರತಕ್ಕ ಮತ್ತು ನೂಲು ಬಿಚ್ಚುವವರ ನಾಲ್ಕು ಪ್ರತಿನಿಧಿಗಳನ್ನು ಹುರಿಕಾರರ ಇಬ್ಬರು ಪ್ರತಿನಿಧಿಗಳನ್ನು ಮತ್ತು ಇಬ್ಬರು ವ್ಯಾಪಾರಿ ಪ್ರತಿನಿಧಿಗಳನ್ನು ಒಳಗೊಂಡ ಸಮಿತಿಯೊಂದನ್ನು ರಚಿಸತಕ್ಕದ್ದು.

(2) ರೇಷ್ಮೆ ವಿನಿಮಯ ಕೇಂದ್ರದಲ್ಲಿನ ರೇಷ್ಮೆ ನೂಲು ಮಾರಾಟದ ಅಥವಾ ಖರೀದಿಯ ಎಲ್ಲಾ ವ್ಯವಹಾರಗಳು ಬಹಿರಂಗ ಹರಾಜಿನ ಮೂಲಕ ನಡೆಯತಕ್ಕದ್ದು ಮತ್ತು ನೂಲಿನ ಬೆಲೆಯ ಸಂದಾಯವು ನಗದು ರೂಪದಲ್ಲಿ ಆಗತಕ್ಕದ್ದು ಮತ್ತು ರೇಷ್ಮೆ ನೂಲನ್ನು ಮೆಟ್ರಿಕ್ ತೂಕದ ಲೆಕ್ಕದಲ್ಲಿ ಮಾರಾಟ ಮಾಡತಕ್ಕದ್ದು.][2]

[4][(3) (1)ನೇ ಉಪ ಪ್ರಕರಣದ (ಬಿ) ಖಂಡದ ಮೇರೆಗಿನ ಸಮಿತಿಗಳ ಸದಸ್ಯರು ಸರ್ಕಾರದ ಇಚ್ಛಾನುಸಾರ ಒಂದು ವರ್ಷದ ಅವಧಿಯವರೆಗೆ ಅಧಿಕಾರ ಸ್ಥಾನವನ್ನು ಹೊಂದಿರತಕ್ಕದ್ದು.][4]

[5][**10ಬಿ. ಸಂಶೋಧನೆ ಮತ್ತು ಅಭಿವೃದ್ಧಿ.-** ಕರ್ನಾಟಕದ ರೇಷ್ಮೆ ಕೃಷಿ ನಿರ್ದೇಶಕರು, ಗೊತ್ತುಪಡಿಸಬಹುದಾದಂಥ ಷರತ್ತುಗಳಿಗೊಳಪಟ್ಟು ರೇಷ್ಮೆ ಹುಳು ತಳಿಗಳು, ಗೂಡುಗಳ ಉತ್ಪಾದನೆ ಮತ್ತು ನೂಲು ಸುತ್ತುವಿಕೆ ಇವುಗಳ ಸಂಬಂಧದಲ್ಲಿ ಸಂಶೋಧನೆ ಕಾರ್ಯ ಕೈಗೊಳ್ಳಲು ಮತ್ತು ಅಭಿವೃದ್ಧಿಪಡಿಸಲು ಯಾವುದೇ ಖಾಸಗಿ ಸಂಸ್ಥೆಗಳಿಗೆ ಅಥವಾ ಸಂಘಟನೆಗಳಿಗೆ ಅಧಿಕಾರ ನೀಡಬಹುದು.][5]

**11. ಮಾಹಿತಿಗಾಗಿ ಅಗತ್ಯಪಡಿಸಲು ಅಧಿಕಾರ ಮತ್ತು ಪ್ರವೇಶ, ಪರಿಶೀಲನೆ, ವಶಪಡಿಸಿಕೊಳ್ಳುವುದು, ಇತ್ಯಾದಿಗಳ ಬಗ್ಗೆ ಅಧಿಕಾರಗಳು.-** (1) [1][ಕರ್ನಾಟಕ ರಾಜ್ಯದ ರೇಷ್ಮೆ ಕೃಷಿ ನಿರ್ದೇಶಕರು][1] ಅಥವಾ ಸರ್ಕಾರದಿಂದ ಅಧಿಸೂಚನೆಯ ಮೂಲಕ ಈ ಸಂಬಂಧದಲ್ಲಿ ಅಧಿಕಾರ ಪಡೆದ ಯಾರೇ ಅಧಿಕಾರಿಯು, ಈ ಅಧಿನಿಯಮದ ಪರಿಪಾಲನೆಯ ದೃಷ್ಟಿಯಿಂದ,-

(ಎ) ಈ ಅಧಿನಿಯಮದ ಮೇರೆಗೆ ಲೈಸೆನ್ಸು ಪಡೆದ ಯಾವನೇ ವ್ಯಕ್ತಿಯನ್ನು ನಿರ್ದಿಷ್ಟಪಡಿಸಬಹುದಾದಂಥ ಮಾಹಿತಿಯನ್ನು ಒದಗಿಸುವಂತೆ ಅಗತ್ಯಪಡಿಸಬಹುದು;

(ಬಿ) ಈ ಅಧಿನಿಯಮದ ಮೇರೆಗೆ ಲೈಸೆನ್ಸು ಪಡೆದ ಯಾವನೇ ವ್ಯಕ್ತಿಯ ಸ್ವಾಧೀನದಲ್ಲಿರುವ ಯಾವುದೇ ರಿಟರ್ನ್‌ನ್ನು, ದಸ್ತಾವೇಜನ್ನು ಅಥವಾ ಲೆಕ್ಕದ ಪುಸ್ತಕವನ್ನು ಪರಿಶೀಲಿಸಬಹುದು ಅಥವಾ ಪರಿಶೀಲಿಸುವಂತೆ ಮಾಡಬಹುದು;

(ಸಿ) [6][xxxxx][6] ಈ ಅಧಿನಿಯಮದ ಮೇರೆಗೆ ಲೈಸೆನ್ಸು ಪಡೆದ ಯಾವನೇ ವ್ಯಕ್ತಿಯು, ಈ ಅಧಿನಿಯಮದ ಅಥವಾ ಅದರ ಮೇರೆಗೆ ಮಾಡಲಾದ ಯಾವುದೇ ನಿಯಮದ ಅಥವಾ ಆದೇಶದ ಉಪಬಂಧಗಳನ್ನು ಪಾಲಿಸುತ್ತಿದ್ದಾನೆ ಎಂಬುದನ್ನು ಮನವರಿಕೆ ಮಾಡಿಕೊಳ್ಳುವ ದೃಷ್ಟಿಯಿಂದ ಅಥವಾ ರೇಷ್ಮೆ ಹುಳುವಿನ ಯಾವುದೇ ರೋಗವಿರುವುದೆ ಅಥವಾ ಇಲ್ಲವೆ ಎಂಬುದನ್ನು ಪತ್ತೆ ಮಾಡುವ ದೃಷ್ಟಿಯಿಂದ ಅಂಥ ವ್ಯಕ್ತಿಯ ಯಾವುದೇ ಆವರಣವನ್ನು, ಜಮೀನನ್ನು, ನೌಕೆಯನ್ನು, ವಾಹನವನ್ನು ಅಥವಾ ಸ್ಥಳವನ್ನು ಪ್ರವೇಶಿಸಬಹುದು ಮತ್ತು ಪರಿಶೀಲಿಸಬಹುದು;

(ಡಿ) ರೇಷ್ಮೆ ಹುಳುಗಳನ್ನು ಸಾಕುತ್ತಿರುವ ಅಥವಾ [7][ರೇಷ್ಮೆ ಹುಳು, ರೇಷ್ಮೆ ಹುಳು ಬಿತ್ತನೆ, [8][ರೇಷ್ಮೆಗೂಡುಗಳು ಅಥವಾ ರೇಷ್ಮೆನೂಲು][8] ][7] -ಇವುಗಳನ್ನು ದಾಸ್ತಾನು ಮಾಡಿರುವ ಅಥವಾ ಸಾಗಿಸುತ್ತಿರುವ ಯಾವುದೇ ಆವರಣಗಳು, ಜಮೀನು, ನೌಕೆ, ವಾಹನ ಅಥವಾ ಸ್ಥಳ -ಇವುಗಳನ್ನು ಅಥವಾ ಇವುಗಳ ಯಾವುದೇ ಭಾಗವನ್ನು ಎಲ್ಲಾ ಯುಕ್ತ ಕಾಲದಲ್ಲಿ ಪ್ರವೇಶಿಸಬಹುದು ಮತ್ತು ಶೋಧಿಸಬಹುದು ಮತ್ತು ರೇಷ್ಮೆ ಹುಳುವಿನ ರೋಗವಿರುವುದಾಗಿ ಅಥವಾ ಈ ಅಧಿನಿಯಮದ ಅಥವಾ ಅದರ ಮೇರೆಗೆ ಮಾಡಲಾದ ಯಾವುದೇ ನಿಯಮದ ಅಥವಾ ಆದೇಶದ ಉಲ್ಲಂಘನೆಯನ್ನು ಮಾಡಿರುವುದಾಗಿ ಅಥವಾ ಮಾಡುತ್ತಿರುವುದಾಗಿ ತನ್ನ ಸ್ವಂತ ತಿಳುವಳಿಕೆಯಿಂದ ಅಥವಾ ಯಾರೇ ವ್ಯಕ್ತಿಯು ನೀಡಿದ ಮತ್ತು ತಾನು ಬರೆದುಕೊಂಡ ಮಾಹಿತಿಯಿಂದ ತನಗೆ ನಂಬಲು ಕಾರಣವಿರುವಂಥ

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. 1979ರ ಅಧಿನಿಯಮ ಸಂಖ್ಯೆ 33ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1981ರ ಅಧಿನಿಯಮ ಸಂಖ್ಯೆ 6ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1980ರ ಅಧಿನಿಯಮ ಸಂಖ್ಯೆ 12ರ ಮೂಲಕ 6.1.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
5. 1994ರ ಅಧಿನಿಯಮ ಸಂಖ್ಯೆ 30ರ ಮೂಲಕ 3.10.1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
6. 1969ರ ಅಧಿನಿಯಮ ಸಂಖ್ಯೆ 29ರ ಮೂಲಕ 22.12.1969ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
7. 1969ರ ಅಧಿನಿಯಮ ಸಂಖ್ಯೆ 29ರ ಮೂಲಕ 22.12.1969 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
8. 1979ರ ಅಧಿನಿಯಮ ಸಂಖ್ಯೆ 33ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][ರೇಷ್ಮೆ ಹುಳುವನ್ನು, ರೇಷ್ಮೆ ಹುಳು ಬಿತ್ತನೆಯನ್ನು, [2][ರೇಷ್ಮೆಗೂಡುಗಳನ್ನು ಅಥವಾ ರೇಷ್ಮೆ ನೂಲನ್ನು][2]][1] ಇರಿಸಲಾದ ಯಾವುದೇ ನೌಕೆ, [3][ವಾಹನ,][3] ಪಾತ್ರೆ, ಸಲಕರಣೆ, ಪ್ಯಾಕೇಜ್ ಅಥವಾ ಹೊದಿಕೆ ಇವುಗಳೂ ಸೇರಿದಂತೆ ಯಾವುದೇ [1][ರೇಷ್ಮೆ ಹುಳು, ರೇಷ್ಮೆ ಹುಳು ಬಿತ್ತನೆ, [2][ರೇಷ್ಮೆ ಗೂಡು ಅಥವಾ ರೇಷ್ಮೆ ನೂಲು][2]][1] ಇವುಗಳನ್ನು ವಶಪಡಿಸಿಕೊಳ್ಳಬಹುದು ಅಥವಾ ವಶಪಡಿಸಿಕೊಳ್ಳಲು ಯಾವನೇ ವ್ಯಕ್ತಿಗೆ ಅಧಿಕಾರ ನೀಡಬಹುದು;

(ಇ) ಯಾವುದೇ ಸ್ಥಳದ ಸೋಂಕುನಾಶ ಮಾಡುವುದು ಅಥವಾ ಯಾವುದೇ ರೇಷ್ಮೆ ಹುಳು ಬಿತ್ತನೆ ಅಥವಾ ರೇಷ್ಮೆ ಹುಳು ಅಥವಾ ಅದರ ಉತ್ಪಾದನೆ, ತಯಾರಿಕೆ, ದಾಸ್ತಾನು ಅಥವಾ ಇವುಗಳಲ್ಲಿ ಉಪಯೋಗಿಸಲಾದ ಯಾವುದೇ ನೌಕೆ, ಪಾತ್ರೆ, ಸಲಕರಣೆ ಇವುಗಳನ್ನು ನಾಶ ಮಾಡುವುದೂ ಸೇರಿದಂತೆ, ರೇಷ್ಮೆ ಹುಳು ರೋಗವು ಹರಡುವುದನ್ನು ತಡೆಗಟ್ಟಲು ಅಥವಾ ಅದನ್ನು ನಿರ್ಮೂಲನ ಮಾಡಲು ತಾನು ಸೂಕ್ತವೆಂದು ಅಥವಾ ಅಗತ್ಯವೆಂದು ಪರಿಗಣಿಸಬಹುದಾದಂಥ ಕ್ರಮಗಳನ್ನು ಮತ್ತು ನಿಯಮಿಸಬಹುದಾದಂಥ ಇತರ ಕ್ರಮವನ್ನು ತೆಗೆದುಕೊಳ್ಳಬಹುದು ಅಥವಾ ತೆಗೆದುಕೊಳ್ಳುವಂತೆ ಮಾಡಬಹುದು.

(2) (1)ನೆಯ ಉಪ-ಪ್ರಕರಣದ (ಸಿ) ಮತ್ತು (ಡಿ) ಖಂಡದಲ್ಲಿ ಉಲ್ಲೇಖಿಸಲಾದ ಯಾವುದೇ ಆವರಣಗಳ, ಜಮೀನಿನ, ನೌಕೆಯ, ವಾಹನದ ಅಥವಾ ಸ್ಥಳದ ಪ್ರಭಾರದಲ್ಲಿರುವ ಯಾವನೇ ಮಾಲೀಕ, ಅಧಿಭೋಗದಾರ ಅಥವಾ ಇತರ ವ್ಯಕ್ತಿಯು, (1)ನೆಯ ಉಪಪ್ರಕರಣದ ಮೇರೆಗೆ ಅಧಿಕೃತಗೊಳಿಸಲಾದ ಅಧಿಕಾರಿಗೆ ಸದರಿ ಉಪ ಪ್ರಕರಣದ ಮೇರೆಗೆ ಆತನು ತನ್ನ ಪ್ರಕಾರ್ಯಗಳನ್ನು ನಿರ್ವಹಿಸಲು ಎಲ್ಲಾ ಯುಕ್ತ ಸೌಲಭ್ಯಗಳನ್ನು ಕೊಡತಕ್ಕದ್ದು.

12. **ದಂಡನೆಗಳು.-** (1) 3ನೆಯ ಅಥವಾ 4ನೆಯ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು [1][[3][ಒಂದು ಸಾವಿರ][3] ರೂಪಾಯಿಗಳ][1] ವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.

(2) [1][6ನೆಯ ಪ್ರಕರಣ ಅಥವಾ 7ನೆಯ ಪ್ರಕರಣದ (1)ನೆಯ ಉಪ ಪ್ರಕರಣದ (ಎ) ಖಂಡದ][1] ಉಪಬಂಧಗಳನ್ನು ಉಲ್ಲಂಘಿಸುವ ಯಾವನೇ ರೇಷ್ಮೆ ಹುಳು ಸಾಕಣೆದಾರನು [4][ಒಂದು ಸಾವಿರ ರೂಪಾಯಿ][4] ಗಳ ವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.

[5][(2ಎ) 7ನೆಯ ಪ್ರಕರಣದ (1)ನೆಯ ಉಪಪ್ರಕರಣದ (ಬಿ) ಖಂಡದ ಅಥವಾ ಆ ಪ್ರಕರಣದ (2)ನೆಯ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾವನೇ ವ್ಯಕ್ತಿಯು ಮೂರು ತಿಂಗಳುಗಳವರೆಗೆ ವಿಸ್ತರಿಸಬಹುದಾದಂಥ ಕಾರಾವಾಸ ಶಿಕ್ಷೆ ಅಥವಾ [4][ಐದು ಸಾವಿರ ರೂಪಾಯಿಗಳವರೆಗೆ][4] ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕದ್ದು.][5]

[6][(2ಬಿ) [3][(5ಎ ಪ್ರಕರಣದ ಅಥವಾ 8ಎ ಪ್ರಕರಣದ ಉಪಬಂಧಗಳನ್ನು][3] ಉಲ್ಲಂಘಿಸಿದ ಯಾವನೇ ವ್ಯಕ್ತಿಯು ಅಪರಾಧ ನಿರ್ಣಯವಾದ ಮೇಲೆ ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ [4][ಇಪ್ಪತ್ತೈದು ಸಾವಿರ ರೂಪಾಯಿಗಳವರೆಗೆ][4] ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು:

ಪರಂತು, ತದ್ವಿರುದ್ಧವಾಗಿ ವಿಶೇಷ ಕಾರಣಗಳು ಇಲ್ಲದಿದ್ದಾಗ ಅಂಥ ಕಾರಾವಾಸವು ಆರು ತಿಂಗಳಿಗಿಂತ ಕಡಿಮೆ ಇರತಕ್ಕದ್ದಲ್ಲ ಮತ್ತು ಜುಲ್ಮಾನೆಯು ಒಂದು ಸಾವಿರ ರೂಪಾಯಿಗಳಿಗಿಂತ ಕಡಿಮೆ ಇರತಕ್ಕದ್ದಲ್ಲ.][6]

[1][(3) 8ನೆಯ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು [3][ಒಂದು ಸಾವಿರದ ಐದುನೂರು][3] ರೂಪಾಯಿವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.][1]

(4) [1][(1), (2), (2ಎ), [6][(2ಬಿ)][6] ಮತ್ತು (3)][1] ನೆಯ ಉಪಪ್ರಕರಣಗಳಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು, ಈ ಅಧಿನಿಯಮದ ಅಥವಾ ಅದರ ಮೇರೆಗಿನ ಯಾವುದೇ ನಿಯಮದ, ಆದೇಶದ ಅಥವಾ ಅಧಿಸೂಚನೆಯ ಉಪಬಂಧಗಳನ್ನು ಉಲ್ಲಂಘಿಸುವ ಯಾವನೇ ವ್ಯಕ್ತಿಯು, [4][[3][ಐದು ಸಾವಿರ][3] ರೂಪಾಯಿ][4] ವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.

[7][(5) xxxxx][7]

**[5][12ಎ. ದುಷ್ಪ್ರೇರಣೆ.-** ಈ ಅಧಿನಿಯಮದ ಮೇರೆಗೆ ದಂಡನೀಯವಾದ ಯಾವುದೇ ಅಪರಾಧವನ್ನು ಯಾವನಾದರೂ ದುಷ್ಪ್ರೇರಿಸಿದರೆ, ಅವನು ಅಂಥ ಅಪರಾಧಕ್ಕಾಗಿ ಈ ಅಧಿನಿಯಮದಲ್ಲಿ ಉಪಬಂಧಿಸಲಾದ ದಂಡನೆಯಿಂದ ದಂಡನೀಯನಾಗತಕ್ಕದ್ದು.

12ಬಿ. **ಕೆಲವು ಅಪರಾಧಗಳು ಸಂಜ್ಞೇಯವಾಗಿರುವುದು.-** 12ನೆಯ ಪ್ರಕರಣದ [2][(2ಎ) ಮತ್ತು (2ಬಿ) ಉಪಪ್ರಕರಣಗಳ][2] ಮೇರೆಗಿನ ಅಪರಾಧಗಳು ಸಂಜ್ಞೇಯವಾಗಿರತಕ್ಕದ್ದು.][5]

1. 1969ರ ಅಧಿನಿಯಮ ಸಂಖ್ಯೆ 29ರ ಮೂಲಕ 22.12.1969 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1979ರ ಅಧಿನಿಯಮ ಸಂಖ್ಯೆ 33ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1997ರ ಅಧಿನಿಯಮ ಸಂಖ್ಯೆ 12ರ ಮೂಲಕ 6.1.1997 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1994ರ ಅಧಿನಿಯಮ ಸಂಖ್ಯೆ 30ರ ಮೂಲಕ 3.10.1994 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1969ರ ಅಧಿನಿಯಮ ಸಂಖ್ಯೆ 29ರ ಮೂಲಕ 22.12.1969 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
6. 1979ರ ಅಧಿನಿಯಮ ಸಂಖ್ಯೆ 33ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
7. 1979ರ ಅಧಿನಿಯಮ ಸಂಖ್ಯೆ 33ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**13. ಲೈಸೆನ್ಸ್‌ನ ಅಮಾನತ್ತು ಅಥವಾ ರದ್ದಿಯಾತಿ, ಸ್ವತ್ತಿನ ಮುಟ್ಟುಗೋಲು ಮತ್ತು ದಂಡ, ಇತ್ಯಾದಿ.-** (1) ಕರ್ನಾಟಕ ರೇಷ್ಮೆ ಕೃಷಿ ನಿರ್ದೇಶಕರು,-

(ಎ) 12ನೇ ಪ್ರಕರಣದ ಮೇರೆಗಿನ ಯಾವುದೇ ಶಿಕ್ಷೆಗೆ ಬಾಧಕವಾಗದಂತೆ, ಸಂಬಂಧಪಟ್ಟ ವ್ಯಕ್ತಿಗೆ ಅಹವಾಲು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿದ ತರುವಾಯ, ಅಂಥ ವ್ಯಕ್ತಿಯು 3,7,8, ಅಥವಾ 8ಎ ಪ್ರಕರಣಗಳನ್ನು ಉಲ್ಲಂಘಿಸಿದ್ದಾನೆಂದು ಮನದಟ್ಟಾದರೆ ಅಂಥ ವ್ಯಕ್ತಿಗೆ ಮಂಜೂರು ಮಾಡಿರುವ ಲೈಸೆನ್ಸ್‌ನ್ನು ಅಮಾನತ್ತು ಅಥವಾ ರದ್ದು ಮಾಡಬಹುದು;

(ಬಿ) ಸಂಬಂಧಿಸಿದ ವ್ಯಕ್ತಿಗೆ ಅಹವಾಲು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿದ ತರುವಾಯ,-

(i) ಆ ವ್ಯಕ್ತಿಯು ಯಾವ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡುಗಳು ಅಥವಾ ರೇಷ್ಮೆ ನೂಲು ಅಥವಾ ಅದನ್ನು ಹೊಂದಿರುವ ಯಾವುದೇ ಪಾತ್ರೆ, ಸಲಕರಣೆ, ಪ್ಯಾಕೇಜು ಅಥವಾ ಹೊದಿಕೆ ಇವುಗಳ ಸಂಬಂಧದಲ್ಲಿ ಅಥವಾ ಯಾವುದೇ ಇತರ ವಸ್ತುವಿನ ಸಂಬಂಧದಲ್ಲಿ ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಲಾದ ನಿಯಮಗಳ ಯಾವುದೇ ಉಪಬಂಧಗಳನ್ನು ಉಲ್ಲಂಘಿಸಿದ್ದಾನೋ ಆ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ನಿರ್ದೇಶಿಸತಕ್ಕದ್ದು; ಮತ್ತು

(ii) ಅಂಥ ವ್ಯಕ್ತಿಯು [2][ [3][ಐವತ್ತು ಸಾವಿರ][3] ರೂಪಾಯಿಗಳ][2] ವರೆಗಿನ, ಆದರೆ, ಯಾವ ಸ್ವತ್ತಿನ ಸಂಬಂಧದಲ್ಲಿ ಈ ಅಧಿನಿಯಮ ಅಥವಾ ನಿಯಮಗಳ ಉಪಬಂಧವನ್ನು ಉಲ್ಲಂಘಿಸಲಾಗಿದೆಯೋ ಅದರ ಮೌಲ್ಯವನ್ನು ಮೀರದ ದಂಡವನ್ನು ಸಂದಾಯ ಮಾಡತಕ್ಕದ್ದು.

(2) (1)ನೇ ಉಪ-ಪ್ರಕರಣದ (ಬಿ) ಖಂಡದ ಉಪ-ಖಂಡ (ii)ರ ಮೇರೆಗೆ ದಂಡವನ್ನು ವಿಧಿಸಲಾದಂತಹ ಯಾವನೇ ವ್ಯಕ್ತಿಯು ಈ ಅಧಿನಿಯಮದ ಮೇರೆಗಿನ ಅಪರಾಧಕ್ಕಾಗಿ ಅದೇ ಸಂಗತಿಗಳ ಸಂಬಂಧದಲ್ಲಿ ಪ್ರಾಸಿಕ್ಯೂಷನ್‌ಗೆ ಗುರಿಯಾಗತಕ್ಕದ್ದಲ್ಲ.

(3) (1)ನೇ ಉಪಪ್ರಕರಣದ ಮೇರೆಗಿನ ಲೈಸೆನ್ಸಿನ ಅಮಾನತ್ತಿನ ಅಥವಾ ರದ್ದಿಯಾತಿಯ ಅಥವಾ ಸ್ವತ್ತಿನ ಮುಟ್ಟುಗೋಲಿನ ಅಥವಾ ದಂಡ ವಿಧಿಸುವಿಕೆಯ ಆದೇಶದಿಂದ ಬಾಧಿತನಾದ ಯಾರೇ ವ್ಯಕ್ತಿಯು ಜಿಲ್ಲಾ ಸೆಷೆನ್ಸ್ ನ್ಯಾಯಾಧೀಶರಿಗೆ ಗೊತ್ತುಪಡಿಸಿದಂತಹ ಕಾಲದೊಳಗೆ ಮತ್ತು ಅಂಥ ವಿಧಾನದಲ್ಲಿ ಅಪೀಲು ಮಾಡಿಕೊಳ್ಳಬಹುದು ಮತ್ತು ಅಂಥ ಅಪೀಲಿನ ಬಗ್ಗೆ ಸೆಷೆನ್ಸ್ ನ್ಯಾಯಾಧೀಶರ ತೀರ್ಮಾನವು ಅಂತಿಮವಾಗಿರತಕ್ಕದ್ದು.][1]

**14. ಅಪರಾಧಗಳ ಬಗ್ಗೆ ರಾಜಿ.-** (1) ಈ ಅಧಿನಿಯಮದ ಮೇರೆಗೆ ದಂಡನೀಯವಾದ ಯಾವುದೇ ಅಪರಾಧಕ್ಕಾಗಿ, [4][ಕರ್ನಾಟಕ ರಾಜ್ಯ ರೇಷ್ಮೆ ಕೃಷಿ ನಿರ್ದೇಶಕರು][4] ಅಥವಾ ಈ ಬಗ್ಗೆ ಗೊತ್ತುಪಡಿಸಬಹುದಾದಂಥ ಇತರ ಅಧಿಕಾರಿಯು ಅಂಥ ಅಪರಾಧಕ್ಕಾಗಿ ಸಂದಾಯ ಮಾಡತಕ್ಕ ಜುಲ್ಮಾನೆಯ ಮೊಬಲಗನ್ನು ಮೀರದಂತೆ ನಿರ್ಧರಿಸಬಹುದಾದ ಮೊಬಲಗು ಸಂದಾಯವಾದ ಮೇಲೆ, ನಿರ್ದೇಶಕರು ಅಥವಾ ಅಂಥ ಇತರ ಅಧಿಕಾರಿಯು ಅಂಥ ಅಪರಾಧದ ಬಗ್ಗೆ ರಾಜಿ ಮಾಡಿಕೊಳ್ಳಬಹುದು.

(2) (1)ನೆಯ ಉಪ-ಪ್ರಕರಣದ ಮೇರೆಗೆ ಅಪರಾಧದ ಬಗ್ಗೆ ರಾಜಿಯಾದ ಮೇಲೆ, ಸಂಬಂಧಿಸಿದ ವ್ಯಕ್ತಿಯು ಅಭಿರಕ್ಷೆಯಲ್ಲಿದ್ದರೆ, ಅವನನ್ನು ಮುಕ್ತಗೊಳಿಸತಕ್ಕದ್ದು ಮತ್ತು ಯಾವುದೇ ಕ್ರಿಮಿನಲ್ ನ್ಯಾಯಾಲಯದಲ್ಲಿ ಅಂಥ ವ್ಯಕ್ತಿಯ ವಿರುದ್ಧ ಸದರಿ ಅಪರಾಧದ ಸಂಬಂಧದಲ್ಲಿ ವ್ಯವಹರಣೆಗಳನ್ನು ಹೂಡಿದ್ದರೆ, ರಾಜಿಯನ್ನು ಖುಲಾಸೆ ಎಂಬಂತೆ ಭಾವಿಸತಕ್ಕದ್ದು ಮತ್ತು ಅಂಥ ಅಪರಾಧದ ಸಂಬಂಧದಲ್ಲಿ ಅಂಥ ವ್ಯಕ್ತಿಯ ವಿರುದ್ಧ ಮುಂದಿನ ಯಾವುದೇ ವ್ಯವಹರಣೆಗಳನ್ನು ಕೈಗೊಳ್ಳತಕ್ಕದ್ದಲ್ಲ.

**15. ಈ ಅಧಿನಿಯಮದ ಮೇರೆಗಿನ ಅಪರಾಧಗಳನ್ನು ಅಧಿವಿಚಾರಣೆ ಮಾಡಲು ಸಕ್ಷಮವಾದ ನ್ಯಾಯಾಲಯ ಮತ್ತು ಅಪರಾಧಗಳ ಸಂಜ್ಞಾನ.-** (1) ಪ್ರಥಮ ದರ್ಜೆ ಮ್ಯಾಜಿಸ್ಟ್ರೇಟ್ ನ್ಯಾಯಾಲಯದ ಹೊರತು ಇತರ ಯಾವುದೇ ನ್ಯಾಯಾಲಯವು, ಈ ಅಧಿನಿಯಮದ ಮೇರೆಗಿನ ಯಾವುದೇ ಅಪರಾಧದ ಸಂಜ್ಞಾನವನ್ನು ತೆಗೆದುಕೊಳ್ಳತಕ್ಕದ್ದಲ್ಲ.

(2) ಯಾವುದೇ ನ್ಯಾಯಾಲಯವು, ಅಧಿನಿಯಮದ ಮೇರೆಗೆ [5][ಸಂಜ್ಞೇಯವಾದ ಅಪರಾಧವಲ್ಲದ ಯಾವುದೇ ಅಪರಾಧ][5] ದ ಸಂಜ್ಞಾನವನ್ನು ಈ ವಿಷಯದಲ್ಲಿ ಸರ್ಕಾರದಿಂದ ಅಧಿಕೃತನಾದ ಅಧಿಕಾರಿಯ ಲಿಖಿತ ದೂರಿನ ಮೇಲೆ ಹೊರತು ತೆಗೆದುಕೊಳ್ಳತಕ್ಕದ್ದಲ್ಲ.

**16. ಅಧಿನಿಯಮದ ಮೇರೆಗೆ ಕಾರ್ಯನಿರ್ವಹಿಸುವ ವ್ಯಕ್ತಿಗಳಿಗೆ ಸಂರಕ್ಷಣೆ.-** ಈ ಅಧಿನಿಯಮದ ಮೇರೆಗೆ ಯಾವನೇ ವ್ಯಕ್ತಿಯು ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕೃತ್ಯಕ್ಕಾಗಿ ಅವನ ವಿರುದ್ಧ ಯಾವುದೇ ದಾವೆಯನ್ನು, ಪ್ರಾಸಿಕ್ಯೂಷನ್‌ನ್ನು ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ.

1. 1979ರ ಅಧಿನಿಯಮ ಸಂಖ್ಯೆ 33ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1994ರ ಅಧಿನಿಯಮ ಸಂಖ್ಯೆ 30ರ ಮೂಲಕ 03.10.1994 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1997ರ ಅಧಿನಿಯಮ ಸಂಖ್ಯೆ 12ರ ಮೂಲಕ 6.1.1997 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 01.11.1973 ರಿಂದ ಜಾರಿಗೆ ಬರವಂತೆ ಅಳವಡಿಸಲಾಗಿದೆ.
5. 1969ರ ಅಧಿನಿಯಮ ಸಂಖ್ಯೆ 29ರ ಮೂಲಕ 22.12.1969 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][16ಎ. **ಬಾಕಿಗಳನ್ನು ವಸೂಲ್ಮಾಡುವ ವಿಧಾನ.-** ಈ ಅಧಿನಿಯಮದ ಮೇರೆಗೆ ಶುಲ್ಕವಾಗಿ, ದಂಡವಾಗಿ ಅಥವಾ ಅನ್ಯಥಾ ಸರ್ಕಾರಕ್ಕೆ ಬರಬೇಕಾಗಿರುವ ಯಾವುದೇ ಮೊಬಲಗನ್ನು, ವಸೂಲಿಯ ಯಾವುದೇ ವಿಧಾನಕ್ಕೆ ಬಾಧಕವಾಗದಂತೆ ಭೂಕಂದಾಯದ ಬಾಕಿಯಂತೆ ವಸೂಲ್ಮಾಡಬಹುದು.][1]

17. **ಅಧಿಕಾರಿಗಳನ್ನು ಸಾರ್ವಜನಿಕ ನೌಕರರೆಂದು ಭಾವಿಸುವುದು.-** ಈ ಅಧಿನಿಯಮದ ಅಥವಾ ಅದರ ಮೇರೆಗೆ ಮಾಡಲಾದ ನಿಯಮಗಳ ಅಥವಾ ಆದೇಶಗಳ ಉಪಬಂಧಗಳಿಗೆ ಅನುಸಾರವಾಗಿ ಕಾರ್ಯ ನಿರ್ವಹಿಸುವ ಪ್ರತಿಯೊಬ್ಬ ಅಧಿಕಾರಿಯನ್ನು ಭಾರತ ದಂಡ ಸಂಹಿತೆಯ 21ನೆಯ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರನೆಂದು ಭಾವಿಸತಕ್ಕದ್ದು.

[2][17ಎ. **ಅಭಿವೃದ್ಧಿ ಮತ್ತು ಬೆಲೆ ಸ್ಥಿರೀಕರಣ ನಿಧಿಯ ಸ್ಥಾಪನೆ.-** (1) ಕರ್ನಾಟಕ ರಾಜ್ಯದಲ್ಲಿ ಕರ್ನಾಟಕ ರೇಷ್ಮೆ ಹುಳು, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು ಅಭಿವೃದ್ಧಿ ಮತ್ತು ಬೆಲೆ ಸ್ಥಿರೀಕರಣ ನಿಧಿ ಎಂಬ ಹೆಸರಿನ ನಿಧಿಯೊಂದನ್ನು ಸ್ಥಾಪಿಸತಕ್ಕದ್ದು.

(2) ಮಾರುಕಟ್ಟೆ ಶುಲ್ಕಗಳು, ಲೈಸೆನ್ಸ್ ಶುಲ್ಕಗಳು ಅಥವಾ ಇತರೆ ಶುಲ್ಕಗಳು ಅಥವಾ ದರಗಳು ಹಾಗೂ ಸರ್ಕಾರದಿಂದ ಮಾಡಲಾದ ಎಲ್ಲಾ ಅನುದಾನಗಳು ಮತ್ತು ವಂತಿಗೆಗಳ ರೂಪದಲ್ಲಿ ಸ್ವೀಕರಿಸಲಾದ ಎಲ್ಲಾ ಹಣವು (1)ನೇ ಉಪ-ಪ್ರಕರಣದ ಮೇರೆಗೆ ಸ್ಥಾಪಿಸಿದ ನಿಧಿಯ ಭಾಗವಾಗಿರತಕ್ಕದ್ದು.

(3) ಸದರಿ ನಿಧಿಯಲ್ಲಿ ಜಮೆಯಾದ ಮೊತ್ತವನ್ನು ರೇಷ್ಮೆ ಗೂಡುಗಳು ಮತ್ತು ರೇಷ್ಮೆ ನೂಲಿನ ಬೆಲೆಗಳ ಸ್ಥಿರೀಕರಣದ ಉದ್ದೇಶಕ್ಕಾಗಿ ಮತ್ತು ರೇಷ್ಮೆ ಬಿತ್ತನೆ ಬೆಳೆಯುವುದು ಮತ್ತು ರೇಷ್ಮೆ ನೂಲನ್ನು ಹುರಿ ಮಾಡುವುದು ಮತ್ತು ಅದಕ್ಕೆ ಸಂಬಂಧಿಸಿದ ಇತರ ವಿಷಯಗಳ ಬಗ್ಗೆ ಹೊರತು ಬೇರೆ ಯಾವುದಕ್ಕೂ ಖರ್ಚು ಮಾಡತಕ್ಕದ್ದಲ್ಲ.][2]

18. **ನಿಯಮಗಳನ್ನು ರಚಿಸಲು ಸರ್ಕಾರದ ಅಧಿಕಾರ.-** (1) ಸರ್ಕಾರವು ಅಧಿಸೂಚನೆಯ ಮೂಲಕ ಪೂರ್ವ ಪ್ರಕಟಣೆಯ ಷರತ್ತಿಗೆ ಒಳಪಟ್ಟು, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ನಿಯಮಗಳನ್ನು ರಚಿಸಬಹುದು.

(2) ವಿಶೇಷತಃ ಮತ್ತು ಹಿಂದೆ ಹೇಳಿದ ಅಧಿಕಾರದ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ, ಅಂಥ ನಿಯಮಗಳು ಕೆಳಕಂಡವುಗಳ ಬಗ್ಗೆ ಉಪಬಂಧ ಕಲ್ಪಿಸಬಹುದು,-

(ಎ) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸಲು ಅಧಿಕಾರ ಪಡೆದ ಅಧಿಕಾರಿಗಳು ಮತ್ತು ಪ್ರಾಧಿಕಾರಗಳ ಕರ್ತವ್ಯಗಳು ಹಾಗೂ ಅಧಿಕಾರಗಳು ಮತ್ತು ಮಾರುಕಟ್ಟೆ ಸಮಿತಿಗಳ ರಚನೆಯ ರೀತಿ ಮತ್ತು ಅಂಥ ಸಮಿತಿಗಳ ಅಧಿಕಾರಗಳು ಮತ್ತು ಕರ್ತವ್ಯಗಳು;

(ಬಿ) ರೇಷ್ಮೆ ಹುಳುಗಳನ್ನು ಸಾಕುವುದಕ್ಕಾಗಿ ರೇಷ್ಮೆ ಹುಳು ಬಿತ್ತನೆಗಳನ್ನು ಉತ್ಪಾದಿಸುವ ಅಥವಾ ತಯಾರಿಸುವ ವ್ಯಕ್ತಿಗಳ ಮತ್ತು ಈ ಅಧಿನಿಯಮದ ಮೇರೆಗೆ ಯಾವ ವ್ಯಕ್ತಿಗಳಿಗೆ ಲೈಸೆನ್ಸುಗಳನ್ನು ನೀಡಬಹುದೋ ಅಂಥ ಇತರ ವ್ಯಕ್ತಿಗಳ ಅರ್ಹತೆಗಳು;

(ಸಿ) ಲೈಸೆನ್ಸುಗಳ ನೀಡಿಕೆ ಮತ್ತು ಅವುಗಳ ಸಂಬಂಧದಲ್ಲಿ ಷರತ್ತುಗಳನ್ನು ವಿಧಿಸುವುದು ಮತ್ತು ಅಂಥ ಲೈಸೆನ್ಸುಗಳ ನೀಡಿಕೆಗೆ ಫೀಜುಗಳು;

(ಡಿ) ರೇಷ್ಮೆ ಹುಳು ಬಿತ್ತನೆಯ ಉತ್ಪಾದನೆ ಮತ್ತು ವಿತರಣೆ ಕೇಂದ್ರಗಳಲ್ಲಿ ವ್ಯವಸ್ಥೆ ಮಾಡಬೇಕಾದ ನೈರ್ಮಲ್ಯ ಮತ್ತು ಇತರ ಅನುಕೂಲತೆಗಳು;

(ಇ) ದ್ವಿಪ್ರತಿ ಲೈಸೆನ್ಸುಗಳ ನೀಡಿಕೆ ಮತ್ತು ಲೈಸೆನ್ಸುಗಳ ನವೀಕರಣ ಮತ್ತು ಅವುಗಳಿಗಾಗಿ ಫೀಜುಗಳು;

(ಎಫ್) ಈ ಅಧಿನಿಯಮದ ಮೇರೆಗಿನ ಯಾವುದೇ ಆದೇಶದ ಮೇಲಿನ ಅಪೀಲುಗಳು, ಅಂಥ ಅಪೀಲುಗಳನ್ನು ಯಾವ ಪ್ರಾಧಿಕಾರಕ್ಕೆ ಸಲ್ಲಿಸಲು ಅವಕಾಶವಿರತಕ್ಕದ್ದೋ ಆ ಪ್ರಾಧಿಕಾರ, ಅಂಥ ಅಪೀಲುಗಳನ್ನು ಎಷ್ಟು ಅವಧಿಯೊಳಗೆ ಸಲ್ಲಿಸಬೇಕೋ ಆ ಸಮಯ ಮಿತಿ ಮತ್ತು ಅಂಥ ಅಪೀಲುಗಳನ್ನು ಕುರಿತು ವ್ಯವಹರಿಸುವ ಕಾರ್ಯವಿಧಾನ;

(ಜಿ) ಈ ಅಧಿನಿಯಮದ ಮೇರೆಗೆ ನೀಡಬೇಕಾದ ಲೈಸೆನ್ಸುಗಳ ನಮೂನೆಗಳು, ಸಲ್ಲಿಸಬೇಕಾದ ವರದಿಗಳು (ರಿಟರ್ನ್‌ಗಳು) ಮತ್ತು ನಿರ್ವಹಿಸಬೇಕಾದ ಲೆಕ್ಕಪತ್ರಗಳು;

1. 1984ರ ಅಧಿನಿಯಮ ಸಂಖ್ಯೆ 20ರ ಮೂಲಕ 2.12.1983 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1979ರ ಅಧಿನಿಯಮ ಸಂಖ್ಯೆ 3ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(ಹೆಚ್) ರೇಷ್ಮೆಗೂಡು ಮಾರುಕಟ್ಟೆಯಲ್ಲಿ ಮಾರಾಟ ಮಾಡಿದ ಮತ್ತು ಖರೀದಿಸಿದ ರೇಷ್ಮೆಗೂಡುಗಳ ಸಂಬಂಧದಲ್ಲಿ ಸಾಕಣೆದಾರರು ಮತ್ತು ನೂಲು ಬಿಚ್ಚುವವರು ಸಂದಾಯ ಮಾಡಬೇಕಾದ ಮಾರುಕಟ್ಟೆ ಫೀಜು, ಅಂಥ ಫೀಜು ರೇಷ್ಮೆಗೂಡಿನ ಬೆಲೆಯ ಶೇಕಡಾ ಎರಡರಷ್ಟನ್ನು ಮೀರತಕ್ಕದ್ದಲ್ಲ;

(ಹೆಚ್ಎ) ರೇಷ್ಮೆ ವಿನಿಮಯ ಕೇಂದ್ರದಲ್ಲಿ ಮಾರಾಟ ಮಾಡಿದ ಮತ್ತು ಖರೀದಿಸಿದ ರೇಷ್ಮೆ ನೂಲಿನ ಸಂಬಂಧದಲ್ಲಿ ನೂಲು ಬಿಚ್ಚುವವರು [2][ಹುರಿಮಾಡುವವರೂ ಆಗಿರುವ ನೂಲು ಬಿಚ್ಚುವವರು ಮತ್ತು [3][ಲೈಸೆನ್ಸ್ ಪಡೆದ ವ್ಯಾಪಾರಿಗಳು][3]][2] ಸಂದಾಯ ಮಾಡಬೇಕಾದ ಮಾರುಕಟ್ಟೆ ಫೀಜು-ಅಂಥ ಫೀಜು ರೇಷ್ಮೆ ನೂಲಿನ ದರದ ಶೇಕಡಾ ಎರಡರಷ್ಟನ್ನು ಮೀರತಕ್ಕದ್ದಲ್ಲ;

(ಹೆಚ್ಬಿ) ರೇಷ್ಮೆ ವಿನಿಮಯ ಕೇಂದ್ರದಲ್ಲಿ ರೇಷ್ಮೆ ನೂಲಿನ ಸಂಬಂಧದಲ್ಲಿ ಮಾರಾಟಗಾರರ ಮತ್ತು ಖರೀದಿದಾರರ ನಡುವಿನ ವಿವಾದಗಳ ಇತ್ಯರ್ಥವೂ ಸೇರಿದಂತೆ, ಒದಗಿಸಬೇಕಾದ ಸೌಕರ್ಯಗಳು ಹಾಗೂ ಸೌಲಭ್ಯಗಳು;

(ಹೆಚ್ಸಿ) 10 ಮತ್ತು 10ಎ ಪ್ರಕರಣಗಳ ಮೇರೆಗೆ ರಚಿಸಲಾದ ಸಮಿತಿಗಳ ಸದಸ್ಯರುಗಳಿಗೆ ಸಂದಾಯವಾಗತಕ್ಕ ಉಪವೇಶನ ಭತ್ಯೆ ಮತ್ತು ಇತರ ಭತ್ಯೆಗಳು;

(ಹೆಚ್ಡಿ) 17ಎ ಪ್ರಕರಣದ ಮೇರೆಗೆ ರಚಿಸಲಾದ ನಿಧಿಗೆ ಸಂಬಂಧಿಸಿದ ವಿಷಯಗಳು;][1]

(ಐ) ರೇಷ್ಮೆ ಹುಳು ಅಥವಾ ರೇಷ್ಮೆ ಹುಳುವಿನ ಬಿತ್ತನೆಯಲ್ಲಿ ರೇಷ್ಮೆ ಹುಳುವಿನ ರೋಗವು ಉಂಟಾಗಿರುವ ಬಗ್ಗೆ ಯಾವನೇ ವ್ಯಕ್ತಿಯು ಒದಗಿಸಬೇಕಾದ ವಿವರಗಳು ಮತ್ತು ಅಂಥ ರೋಗದ ನಿವಾರಣೆಗಾಗಿ ಅಥವಾ ನಿರ್ಮೂಲನೆಗಾಗಿ ತೆಗೆದುಕೊಳ್ಳಬೇಕಾದ ಕ್ರಮಗಳು;

(ಜೆ) ಈ ಅಧಿನಿಯಮದ ಮೇರೆಗಿನ ವ್ಯವಹರಣೆಗಳಲ್ಲಿ ಅನುಸರಿಸಬೇಕಾದ ಕಾರ್ಯವಿಧಾನವನ್ನು ಸಾಮಾನ್ಯವಾಗಿ ನಿಯಂತ್ರಿಸುವ ವಿಚಾರ;

(ಕೆ) ಈ ಅಧಿನಿಯಮದ ಮೇರೆಗೆ ನಿಯಮಿಸಬಹುದಾದಂಥ ಯಾವುದೇ ಇತರ ವಿಷಯ.

[4][ (2ಎ) ಈ ಅಧಿನಿಯಮದ ಮೇರೆಗೆ ಒಂದು ನಿಯಮವನ್ನು ಪೂರ್ವಾನ್ವಯವಾಗಿ ಪರಿಣಾಮಕಾರಿಯಾಗುವಂತೆ ರಚಿಸಬಹುದು ಮತ್ತು ಅಂತಹ ಒಂದು ನಿಯಮವನ್ನು ಮಾಡಿದಾಗ ಆ ನಿಯಮವನ್ನು ರಚಿಸಿರುವ ಕಾರಣಗಳನ್ನು ನಿರ್ದಿಷ್ಟಪಡಿಸುವ ಒಂದು ಹೇಳಿಕೆಯನ್ನು ರಾಜ್ಯ ವಿಧಾನ ಮಂಡಲದ ಉಭಯ ಸಭೆಗಳ ಮುಂದೆ ಇಡತಕ್ಕದ್ದು ಮತ್ತು ಈ ಅಧಿನಿಯಮದ (3)ನೇ ಉಪಪ್ರಕರಣದ ಮೇರೆಗೆ ಮಾಡಲಾಗುವ ಯಾವುದೇ ತಿದ್ದುಪಡಿಗೊಳಪಟ್ಟು, ಅದು ಈ ಅಧಿನಿಯಮದಲ್ಲಿ ಅಧಿನಿಯಮಿತಿಗೊಳಿಸಲಾದಂತೆ ಪರಿಣಾಮಕಾರಿಯಾಗಿರತಕ್ಕದ್ದು.][4]

(3) ಈ ಅಧಿನಿಯಮದ ಮೇರೆಗೆ ರಚಿಸಿದ ಎಲ್ಲಾ ನಿಯಮಗಳನ್ನು, ಅವುಗಳನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನ ಅಥವಾ ಎರಡು ಅಥವಾ ಹೆಚ್ಚು ಅಧಿವೇಶನಗಳಲ್ಲಿ ಅಡಕವಾಗಬಹುದಾದಂಥ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಇಡತಕ್ಕದ್ದು ಮತ್ತು ಸದರಿ ಅವಧಿಯು ಮುಗಿಯುವುದಕ್ಕೆ ಮುಂಚೆ, ರಾಜ್ಯ ವಿಧಾನ ಮಂಡಲದ ಉಭಯ ಸದನಗಳಲ್ಲಿ ಯಾವೊಂದು ಸದನವು ಯಾವುದೇ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಿದರೆ ಅಥವಾ ಯಾವುದೇ ನಿಯಮವು ಪರಿಣಾಮ ಹೊಂದಿರತಕ್ಕದ್ದಲ್ಲವೆಂದು ನಿರ್ದೇಶಿಸಿದರೆ ಮತ್ತು ಮಾರ್ಪಾಟು ಅಥವಾ ನಿರ್ದೇಶನವನ್ನು ಇನ್ನೊಂದು ಸದನವು ಒಪ್ಪಿದರೆ, ಸದರಿ ನಿಯಮವು, ಆ ತರುವಾಯ ಸಂದರ್ಭಾನುಸಾರ, ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ, ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಮೇರೆಗೆ ಹಿಂದೆ ಮಾಡಿದ ಯಾವುದೇ ಕಾರ್ಯದ ಕಾನೂನು ಮಾನ್ಯತೆಗೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

**19. ನಿರಸನ ಮತ್ತು ಉಳಿಸುವಿಕೆಗಳು.-** ಬಳ್ಳಾರಿ ಜಿಲ್ಲೆಯ ಹೊರತು ಮೈಸೂರು ಪ್ರದೇಶದಲ್ಲಿ ಜಾರಿಯಲ್ಲಿರುವ ಮೈಸೂರು ರೇಷ್ಮೆ ಹುಳು ರೋಗಗಳ ನಿಯಂತ್ರಣ ಅಧಿನಿಯಮ, 1943 (1943ರ ಮೈಸೂರು ಅಧಿನಿಯಮ VIII) ಮತ್ತು ಮೈಸೂರು ರೇಷ್ಮೆಮೊಟ್ಟೆ (ವಿತರಣೆಯ ನಿಯಂತ್ರಣ) ಅಧಿನಿಯಮ, 1952 (1952ರ ಮೈಸೂರು ಅಧಿನಿಯಮ XXXIII), ಬಳ್ಳಾರಿ ಜಿಲ್ಲೆಯಲ್ಲಿ ಜಾರಿಯಲ್ಲಿರುವ, ಮದರಾಸು ರೇಷ್ಮೆ ಹುಳು ರೋಗಗಳ (ನಿವಾರಣೆ ಮತ್ತು ನಿರ್ಮೂಲನೆ) ಅಧಿನಿಯಮ, 1948 (1948ರ ಮದರಾಸು ಅಧಿನಿಯಮ II)

1. 1979ರ ಅಧಿನಿಯಮ ಸಂಖ್ಯೆ 33ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1980ರ ಅಧಿನಿಯಮ ಸಂಖ್ಯೆ 12ರ ಮೂಲಕ 6.11.1979 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1981ರ ಅಧಿನಿಯಮ ಸಂಖ್ಯೆ 6ರ ಮೂಲಕ 25.1.1960 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1984ರ ಅಧಿನಿಯಮ ಸಂಖ್ಯೆ 20ರ ಮೂಲಕ 2.12.1983 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

ಮತ್ತು [2][ಮಂಗಳೂರು ಮತ್ತು ಕೊಳ್ಳೇಗಾಲ ಪ್ರದೇಶದಲ್ಲಿ][2] ಜಾರಿಯಲ್ಲಿರುವ ಮದರಾಸು ರೇಷ್ಮೆ ಹುಳು ಬಿತ್ತನೆ, (ಉತ್ಪಾದನೆ, ಸರಬರಾಜು ಮತ್ತು ವಿತರಣೆ) ಅಧಿನಿಯಮ, 1956 (1956ರ ಮದರಾಸು ಅಧಿನಿಯಮ XXIII) ಇವುಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು, ಅಂಥ ನಿರಸನವು,-

(ಎ) ಸದರಿ ಅಧಿನಿಯಮಿತಿಗಳ ಹಿಂದಿನ ಪ್ರವರ್ತನೆ ಅಥವಾ ಅದರ ಮೇರೆಗೆ ಕ್ರಮಬದ್ಧವಾಗಿ ಮಾಡಿದ ಅಥವಾ ಮಾಡಲು ಎಡೆಕೊಟ್ಟ ಯಾವುದೇ ಕೃತ್ಯ ; ಅಥವಾ

(ಬಿ) ಸದರಿ ಅಧಿನಿಯಮಿತಿಗಳ ಮೇರೆಗೆ ಆರ್ಜಿಸಿದ, ಉಂಟಾದ ಅಥವಾ ವಹಿಸಿದ ಯಾವುದೇ ಹಕ್ಕು, ವಿಶೇಷ ಹಕ್ಕು, ಬಾಧ್ಯತೆ ಅಥವಾ ಹೊಣೆ; ಅಥವಾ

(ಸಿ) ಸದರಿ ಅಧಿನಿಯಮಿತಿಗಳ ವಿರುದ್ಧ ಮಾಡಿದ ಯಾವುದೇ ಅಪರಾಧದ ಸಂಬಂಧದಲ್ಲಿ ಗುರಿಯಾದ ಯಾವುದೇ ದಂಡನೆ, ಮುಟ್ಟುಗೋಲು ಅಥವಾ ಶಿಕ್ಷೆ; ಅಥವಾ

(ಡಿ) ಈ ಹಿಂದೆ ಹೇಳಿದಂತೆ, ಯಾವುದೇ ಅಂಥ ಹಕ್ಕು, ವಿಶೇಷ ಹಕ್ಕು, ಬಾಧ್ಯತೆ, ಹೊಣೆ, ಮುಟ್ಟುಗೋಲು ಅಥವಾ ಶಿಕ್ಷೆ ಇವುಗಳ ಸಂಬಂಧದಲ್ಲಿ ಯಾವುದೇ ತನಿಖೆ, ಕಾನೂನು ವ್ಯವಹರಣೆ ಅಥವಾ ಪರಿಹಾರೋಪಾಯ ಇವುಗಳ ಮೇಲೆ ಪ್ರಭಾವಬೀರತಕ್ಕದ್ದಲ್ಲ;

ಮತ್ತು ಈ ಅಧಿನಿಯಮವನ್ನು ಜಾರಿಗೊಳಿಸಿರದಿದ್ದರೆ ಹೇಗೋ ಹಾಗೆ ಯಾವುದೇ ಅಂಥ ತನಿಖೆ, ಕಾನೂನು ವ್ಯವಹರಣೆ ಅಥವಾ ಪರಿಹಾರೋಪಾಯವನ್ನು ಹೂಡಬಹುದು, ಮುಂದುವರಿಸಬಹುದು ಅಥವಾ ಜಾರಿಗೊಳಿಸಬಹುದು ಮತ್ತು ಯಾವುದೇ ಅಂಥ ದಂಡನೆ, ಮುಟ್ಟುಗೋಲು ಅಥವಾ ಶಿಕ್ಷೆಯನ್ನು ವಿಧಿಸಬಹುದು:

ಮತ್ತೂ ಪರಂತು, ಹಿಂದಿನ ಪರಂತುಕಕ್ಕೆ ಒಳಪಟ್ಟು ಈ ಅಧಿನಿಯಮದ ಉಪಬಂಧಗಳೊಂದಿಗೆ ಸುಸಂಗತವಾಗಬಹುದಾದಷ್ಟು ಮಟ್ಟಿಗೆ, ನಿರಸಿತ ಅಧಿನಿಯಮಿತಿಗಳ ಮೇರೆಗೆ ಮಾಡಿದ ಯಾವುದೇ ಕೃತ್ಯ ಅಥವಾ ತೆಗೆದುಕೊಂಡ ಯಾವುದೇ ಕ್ರಮವನ್ನು (ಮಾಡಲಾದ ಯಾವುದೇ ನೇಮಕವನ್ನು ಅಥವಾ ಪ್ರತ್ಯಾಯೋಜನೆಯನ್ನು ಅಥವಾ ಹೊರಡಿಸಲಾದ ಅಧಿಸೂಚನೆ, ಆದೇಶ, ಸೂಚನೆ ಅಥವಾ ನಿರ್ದೇಶನ ಅಥವಾ ರಚಿಸಲಾದ ನಿಯಮ ಇವುಗಳನ್ನು ಒಳಗೊಳ್ಳುತ್ತದೆ) ಈ ಅಧಿನಿಯಮದ ಸಂವಾದಿ ಉಪಬಂಧಗಳ ಮೇರೆಗೆ ಮಾಡಲಾಗಿದೆ ಮತ್ತು ತೆಗೆದುಕೊಳ್ಳಲಾಗಿದೆ ಎಂಬುದಾಗಿ ಭಾವಿಸತಕ್ಕದ್ದು ಮತ್ತು ಈ ಅಧಿನಿಯಮದ ಮೇರೆಗೆ ಮಾಡಲಾದ ಯಾವುದೇ ಕೃತ್ಯದ ಅಥವಾ ತೆಗೆದುಕೊಂಡ ಕ್ರಮದ ಮೂಲಕ ರದ್ದುಗೊಳ್ಳುವತನಕ ಅವು ಹಾಗೆ ಮುಂದುವರಿಯತಕ್ಕದ್ದು.

## ಅಧಿಸೂಚನೆಗಳು

### I

**ಬೆಂಗಳೂರು, ದಿನಾಂಕ 28ನೇ ಏಪ್ರಿಲ್ 1960 [ಸಂಖ್ಯೆ.ಸಿಐ 41 ಎಸ್‌ಎಡಿ 60]**

ಮೈಸೂರು ರೇಷ್ಮೆ ಹುಳು ಬಿತ್ತನೆ ಮತ್ತು ರೇಷ್ಮೆ ಗೂಡು (ಉತ್ಪಾದನೆ, ಸರಬರಾಜು ಮತ್ತು ವಿತರಣೆ ವಿನಿಯಮನ) ಅಧಿನಿಯಮ, 1959 (1960ರ ಮೈಸೂರು ಅಧಿನಿಯಮ ಸಂಖ್ಯೆ 5)ರ 1ನೇ ಪ್ರಕರಣದ (3)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1960ರ ಮೇ 2ನೇ ದಿವಸವನ್ನು ಸದರಿ ಅಧಿನಿಯಮದ 2ನೇ ಮತ್ತು 18ನೇ ಪ್ರಕರಣಗಳ ಉಪಬಂಧಗಳು ಹೈದರಾಬಾದ್ ಪ್ರದೇಶದಲ್ಲಿ, ಮದ್ರಾಸ್ ಪ್ರದೇಶದಲ್ಲಿ, ಮುಂಬಯಿ ಪ್ರದೇಶದಲ್ಲಿ, ಕೊಡಗು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದೇಶಿಸಿದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎ. ಅಲಿಖಾನ್)**

ಸರ್ಕಾರದ ಉಪ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

### II

**ಬೆಂಗಳೂರು, ದಿನಾಂಕ 25ನೇ ಜನವರಿ 1961 (ಮಾಘ 5, ಕ್ರಿ.ಶ. 1882) [ಸಂಖ್ಯೆ ಸಿಐ 2 ಎಸ್‌ಎಡಿ 61]**

ಮೈಸೂರು ರೇಷ್ಮೆ ಹುಳು ಬಿತ್ತನೆ ಮತ್ತು ರೇಷ್ಮೆ ಗೂಡು (ಉತ್ಪಾದನೆ, ಸರಬರಾಜು ಮತ್ತು ವಿತರಣೆ ವಿನಿಯಮನ) ಅಧಿನಿಯಮ, 1959 (1960ರ ಮೈಸೂರು ಅಧಿನಿಯಮ ಸಂಖ್ಯೆ 5)ರ 1ನೇ ಪ್ರಕರಣದ (3)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1961ನೇ ಜನವರಿ 30ನೇ ದಿವಸವನ್ನು ಸದರಿ ಅಧಿನಿಯಮದ 3, 4, 5, 9, 11, 12, 13, 14, 15, 16 ಮತ್ತು 17ನೇ ಪ್ರಕರಣಗಳು ಮುಂಬಯಿ, ಹೈದ್ರಾಬಾದ್ ಮತ್ತು ಮದ್ರಾಸ್ ಪ್ರದೇಶದಲ್ಲಿ ಮತ್ತು ಮೈಸೂರು ರಾಜ್ಯದ ಕೊಡಗು ಜಿಲ್ಲೆಯಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸಿದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ಸುಬ್ರಮಣ್ಯಂ)**

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

### III

**ಬೆಂಗಳೂರು, ದಿನಾಂಕ 28ನೇ ಜನವರಿ 1961 (ಮಾಘ 8, ಕ್ರಿ.ಶ. 1882) [ಸಂಖ್ಯೆ ಸಿಐ 2 ಎಸ್‌ಎಡಿ 61]**

ಮೈಸೂರು ರೇಷ್ಮೆ ಹುಳು ಬಿತ್ತನೆ ಮತ್ತು ರೇಷ್ಮೆ ಗೂಡು (ಉತ್ಪಾದನೆ, ಸರಬರಾಜು ಮತ್ತು ವಿತರಣೆ ವಿನಿಯಮನ) ಅಧಿನಿಯಮ, 1959 (1960ರ ಮೈಸೂರು ಅಧಿನಿಯಮ ಸಂಖ್ಯೆ 5)ರ 1ನೇ ಪ್ರಕರಣದ (3)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1961ರ ಜನವರಿ 30ನೇ ದಿವಸವನ್ನು ಸದರಿ ಅಧಿನಿಯಮದ 2, 3, 4, 5, 9, 11, 12, 13, 14, 15, 16, 17 ಮತ್ತು 18ನೇ ಪ್ರಕರಣಗಳು, ಸದರಿ ಪ್ರಕರಣಗಳು ಈಗಾಗಲೇ ಜಾರಿಯಲ್ಲಿರುವ ಪ್ರದೇಶಗಳ ಹೊರತು ಮೈಸೂರು ರಾಜ್ಯದ ಮೈಸೂರಿನ ಎಲ್ಲಾ ಪ್ರದೇಶದಲ್ಲಿ ಜಾರಿಗೆ ಬರತಕ್ಕದ್ದೆಂದು ಈ ಮೂಲಕ ನಿರ್ದಿಷ್ಟಪಡಿಸಿದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಬಿ. ಲಕ್ಷ್ಮಣರಾವ್)**

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

## IV

**ಬೆಂಗಳೂರು, ದಿನಾಂಕ 13ನೇ/15ನೇ ಡಿಸೆಂಬರ್ 1962 (ಮಾರ್ಗಶಿರ 22ನೇ/ 24ನೇ ಕ್ರಿ.ಶ. 1884) [ಸಂಖ್ಯೆ ಸಿಐ 122 ಎಸ್‌ಎಡಿ 62]**

ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 (1960ರ ಮೈಸೂರು ಅಧಿನಿಯಮ ಸಂಖ್ಯೆ 5)ರ 1ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1962ರ ಡಿಸೆಂಬರ್ 28ನೇ ದಿವಸವನ್ನು ಸದರಿ ಅಧಿನಿಯಮದ 6, 7 ಮತ್ತು 8ನೇ ಪ್ರಕರಣದ ಉಪಬಂಧಗಳು ಚಾಮರಾಜನಗರ, ನಂಜನಗೂಡು ಮತ್ತು ಗುಂಡ್ಲುಪೇಟೆ ತಾಲ್ಲೂಕುಗಳಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ಬಿ. ಲಕ್ಷ್ಮಣರಾವ್)

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

## V

**ಬೆಂಗಳೂರು, ದಿನಾಂಕ 23ನೇ/25ನೇ ಜನವರಿ 1963 [ಸಂಖ್ಯೆ ಸಿಐ 5 ಎಸ್‌ಎಡಿ 63 (I)]**

ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 (1960ರ ಮೈಸೂರು ಅಧಿನಿಯಮ ಸಂಖ್ಯೆ 5)ರ 1ನೇ ಪ್ರಕರಣದ (3)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1963ರ ಜನವರಿ 31, ಗುರುವಾರವನ್ನು ಸದರಿ ಅಧಿನಿಯಮದ 6, 7 ಮತ್ತು 8ನೇ ಪ್ರಕರಣಗಳ ಉಪಬಂಧಗಳು ಕೊಳ್ಳೇಗಾಲ ಮತ್ತು ಯಳಂದೂರು ತಾಲ್ಲೂಕುಗಳಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ಬಿ. ಲಕ್ಷ್ಮಣರಾವ್)

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

## VI

**ಬೆಂಗಳೂರು, ದಿನಾಂಕ 5ನೇ ಜೂನ್ 1963 [ಸಂಖ್ಯೆ ಸಿಐ 50 ಎಸ್‌ಎಡಿ 63 (I)]**

ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 (1960ರ ಮೈಸೂರು ಅಧಿನಿಯಮ ಸಂಖ್ಯೆ 5)ರ 1ನೇ ಪ್ರಕರಣದ (3)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1963ರ ಜೂನ್ 17 ಸೋಮವಾರವನ್ನು ಸದರಿ ಅಧಿನಿಯಮದ 6, 7 ಮತ್ತು 8ನೇ ಪ್ರಕರಣದ ಉಪಬಂಧಗಳು ಚನ್ನಪಟ್ಟಣ, ಕನಕಪುರ ಮತ್ತು ಬೆಂಗಳೂರು ಜಿಲ್ಲೆಯ ರಾಮನಗರ ತಾಲ್ಲೂಕು ಮತ್ತು ಮಂಡ್ಯ ಜಿಲ್ಲೆಯ ಮದ್ದೂರು ತಾಲೂಕಿನಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ಬಿ. ಲಕ್ಷ್ಮಣರಾವ್)

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

## VII

**ಬೆಂಗಳೂರು, ದಿನಾಂಕ 10ನೇ ಜೂನ್ 1963 [ಸಂಖ್ಯೆ ಸಿಐ 47 ಎಸ್‌ಎಡಿ 63]**

ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 (1960ರ ಮೈಸೂರು ಅಧಿನಿಯಮ ಸಂಖ್ಯೆ 5)ರ 1ನೇ ಪ್ರಕರಣದ (3)ನೇ ಉಪ-ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1963ರ ಜೂನ್ 17, ಸೋಮವಾರವನ್ನು ಸದರಿ ಅಧಿನಿಯಮದ 6, 7 ಮತ್ತು 8ನೇ ಪ್ರಕರಣದ ಉಪಬಂಧಗಳು ಮೈಸೂರು ಮತ್ತು ಮೈಸೂರು ಜಿಲ್ಲೆಯ ಟಿ.ನರಸೀಪುರ ತಾಲೂಕುಗಳಲ್ಲಿ, ಕೊಡಗು ಜಿಲ್ಲೆಯ ಸೋಮವಾರಪೇಟೆ ತಾಲೂಕಿನಲ್ಲಿ ಮತ್ತು ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲೂಕಿನಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ಬಿ. ಲಕ್ಷ್ಮಣರಾವ್)

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

## VIII

**ಬೆಂಗಳೂರು, ದಿನಾಂಕ 5ನೇ ಆಗಸ್ಟ್ 1963 [ಸಂಖ್ಯೆ ಸಿಐ 59 ಎಸ್‌ಎಡಿ 63(I)]**

ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 (1960ರ ಮೈಸೂರು ಅಧಿನಿಯಮ ಸಂಖ್ಯೆ 5)ರ 1ನೇ ಪ್ರಕರಣದ (3)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1963ರ ಸೆಪ್ಟೆಂಬರ್ 6ನೇ ದಿವಸವನ್ನು ಸದರಿ ಅಧಿನಿಯಮದ 6, 7

ಮತ್ತು 8ನೇ ಪ್ರಕರಣದ ಉಪಬಂಧಗಳು ಕೋಲಾರ ಜಿಲ್ಲೆಯಲ್ಲಿ ಮತ್ತು ದೇವನಹಳ್ಳಿ, ಹೊಸಕೋಟೆ, ಆನೇಕಲ್ ಮತ್ತು ಬೆಂಗಳೂರು ದಕ್ಷಿಣ ತಾಲೂಕುಗಳು, ಬೆಂಗಳೂರು ಜಿಲ್ಲೆಯಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಜೆ.ಟಿ. ಬೋರಕರ್)**

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

## IX

**ಬೆಂಗಳೂರು, ದಿನಾಂಕ 8ನೇ/15ನೇ ಏಪ್ರಿಲ್ 1968 [ಸಂಖ್ಯೆ ಸಿಐ 6 ಬಿಎಡಿ 63 (I)]**

**ಎಸ್.ಓ.775.-** ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 (1960ರ ಮೈಸೂರು ಅಧಿನಿಯಮ ಸಂಖ್ಯೆ 5)ರ 1ನೇ ಪ್ರಕರಣದ (3)ನೇ ಉಪ-ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1968ರ ಮೇ 20ನೇ ದಿವಸವನ್ನು ಸದರಿ ಅಧಿನಿಯಮದ 6, 7 ಮತ್ತು 8ನೇ ಪ್ರಕರಣದ ಉಪಬಂಧಗಳು ಬೆಂಗಳೂರು ಜಿಲ್ಲೆಯ ಬೆಂಗಳೂರು ಉತ್ತರ ತಾಲೂಕಿನಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಹೆಚ್.ಎಲ್. ಲಿಂಗರಾಜ್ ಅರಸ್)**

ಉಪ ಕಾರ್ಯದರ್ಶಿ,

## X

**ಬೆಂಗಳೂರು, ದಿನಾಂಕ 10ನೇ / 15ನೇ ಏಪ್ರಿಲ್ 1968 [ಸಂಖ್ಯೆ ಸಿಐ 27 ಬಿಎಡಿ 67 (I)]**

**ಎಸ್.ಓ.785.-** ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 (1960ರ ಮೈಸೂರು ಅಧಿನಿಯಮ ಸಂಖ್ಯೆ 5)ರ 1ನೇ ಪ್ರಕರಣದ (3)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1968ರ ಮೇ 20ನೇ ದಿವಸವನ್ನು ಸದರಿ ಅಧಿನಿಯಮದ 6, 7 ಮತ್ತು 8ನೇ ಪ್ರಕರಣದ ಉಪಬಂಧಗಳು ಈ ಮುಂದಿನ ಪ್ರದೇಶಗಳಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸಿದೆ, ಎಂದರೆ.

(1) ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ, ಹುಣಸೂರು, ಕೃಷ್ಣರಾಜಸಾಗರ ಮತ್ತು ಪಿರಿಯಾಪಟ್ಟಣ ತಾಲೂಕುಗಳು.

(2) ಕೊಡಗು ಜಿಲ್ಲೆಯ ಮಡಿಕೇರಿ ಮತ್ತು ವಿರಾಜಪೇಟೆ ತಾಲೂಕುಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಹೆಚ್.ಎಲ್. ಲಿಂಗರಾಜ್ ಅರಸ್)**

ಉಪ ಕಾರ್ಯದರ್ಶಿ.

## XI

**ಬೆಂಗಳೂರು, ದಿನಾಂಕ 8ನೇ / 15ನೇ ಏಪ್ರಿಲ್ 1968 [ಸಂಖ್ಯೆ ಸಿಐ 20 ಬಿಎಡಿ 67 (I)]**

**ಎಸ್.ಓ.789.-** ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 (1960ರ ಮೈಸೂರು ಅಧಿನಿಯಮ ಸಂಖ್ಯೆ 5)ರ 1ನೇ ಪ್ರಕರಣದ (3)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1968ರ ಮೇ 20ನೇ ದಿವಸವನ್ನು ಸದರಿ ಅಧಿನಿಯಮದ 6, 7 ಮತ್ತು 8ನೇ ಪ್ರಕರಣಗಳ ಉಪಬಂಧಗಳು ಮಂಡ್ಯ ಜಿಲ್ಲೆಯ ಮಂಡ್ಯ ತಾಲೂಕಿನಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಹೆಚ್.ಎಲ್. ಲಿಂಗರಾಜ್ ಅರಸ್)**

ಉಪ ಕಾರ್ಯದರ್ಶಿ.

## XII

**ಬೆಂಗಳೂರು, ದಿನಾಂಕ 12ನೇ/ 16ನೇ ಡಿಸೆಂಬರ್, 1968**

**ಎಸ್.ಓ.2596.-** ಮೈಸೂರು ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ಮತ್ತು ವಿತರಣೆ ವಿನಿಯಮನ) (ತಿದ್ದುಪಡಿ) ಅಧಿನಿಯಮ, 1969 (1969ರ ಮೈಸೂರು ಅಧಿನಿಯಮ ಸಂಖ್ಯೆ 29)ರ 1ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1969ರ ಡಿಸೆಂಬರ್ 22ನೇ ದಿವಸವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಚಂದಪ್ಪ ಪಟೇಲ್)**

ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

**XIII**

**ಬೆಂಗಳೂರು, ದಿನಾಂಕ 20ನೇ ಮಾರ್ಚ್ 1972 [ಸಂಖ್ಯೆ ಸಿಐ 31 ಬಿಎಡಿ 71]**

ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ವಿನಿಯಮನ) ಅಧಿನಿಯಮ, 1959 (1960ರ ಮೈಸೂರು ಅಧಿನಿಯಮ ಸಂಖ್ಯೆ 5)ರ 1ನೇ ಪ್ರಕರಣದ (3)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1972ರ ಮಾರ್ಚ್ 23ನೇ ದಿನಾಂಕವನ್ನು ಸದರಿ ಅಧಿನಿಯಮದ 6, 7 ಮತ್ತು 8ನೇ ಪ್ರಕರಣಗಳ ಉಪಬಂಧಗಳು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಪ್ರದೇಶಗಳಲ್ಲಿ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸಿದೆ.

| ಜಿಲ್ಲೆ | ತಾಲ್ಲೂಕುಗಳು / ಗ್ರಾಮ |
|---|---|
| 1. ಬೆಂಗಳೂರು ಜಿಲ್ಲೆ | (ಎ) ಸದರಿ ಪ್ರಕರಣದ ಉಪಬಂಧಗಳು ಈಗಾಗಲೇ ಜಾರಿಗೆ ಬಂದಿರುವ, ಅಧಿಸೂಚನೆ ಸಂಖ್ಯೆ. ಸಿಐ 131 ಎಸ್‌ಎಡಿ 59, ದಿನಾಂಕ 8ನೇ ಏಪ್ರಿಲ್ 1960 ರಲ್ಲಿ ನಮೂದಿಸಿರುವ ಗ್ರಾಮಗಳನ್ನು ಹೊರತುಪಡಿಸಿ, ನಾಗಮಂಗಲ ತಾಲೂಕಿನ ಎಲ್ಲಾ ಗ್ರಾಮಗಳು.<br>(ಬಿ) ಸದರಿ ಪ್ರಕರಣಗಳ ಉಪಬಂಧಗಳು ಈಗಾಗಲೇ ಜಾರಿಗೆ ಬಂದಿರುವ, ಅಧಿಸೂಚನೆ ಸಂಖ್ಯೆ. ಸಿಐ 131 ಎಸ್‌ಎಡಿ 59, ದಿನಾಂಕ 8ನೇ ಏಪ್ರಿಲ್ 1960 ರಲ್ಲಿ ನಮೂದಿಸಿರುವ ಗ್ರಾಮಗಳನ್ನು ಹೊರತುಪಡಿಸಿ, ಮಾಗಡಿ ತಾಲೂಕಿನ ಎಲ್ಲಾ ಗ್ರಾಮಗಳು.<br>(ಸಿ) ಸದರಿ ಪ್ರಕರಣಗಳ ಉಪಬಂಧಗಳು ಈಗಾಗಲೇ ಜಾರಿಗೆ ಬಂದಿರುವ, ಅಧಿಸೂಚನೆ ಸಂಖ್ಯೆ. ಸಿಐ 131 ಎಸ್‌ಎಡಿ 59, ದಿನಾಂಕ 8ನೇ ಏಪ್ರಿಲ್ 1960 ರಲ್ಲಿ ನಮೂದಿಸಿರುವ ಗ್ರಾಮಗಳನ್ನು ಹೊರತುಪಡಿಸಿ, ದೊಡ್ಡಬಳ್ಳಾಪುರ ತಾಲೂಕಿನ ಎಲ್ಲಾ ಗ್ರಾಮಗಳು. |
| 2. ತುಮಕೂರು ಜಿಲ್ಲೆ | (ಎ) ಸದರಿ ಪ್ರಕರಣಗಳ ಉಪಬಂಧಗಳು ಈಗಾಗಲೇ ಜಾರಿಗೆ ಬಂದಿರುವ, ಅಧಿಸೂಚನೆ ಸಂಖ್ಯೆ. ಸಿಐ 131 ಎಸ್‌ಎಡಿ 59, ದಿನಾಂಕ 8ನೇ ಏಪ್ರಿಲ್ 1960 ರಲ್ಲಿ ನಮೂದಿಸಿರುವ ಗ್ರಾಮಗಳನ್ನು ಹೊರತುಪಡಿಸಿ, ಕುಣಿಗಲ್ ತಾಲೂಕಿನ ಎಲ್ಲಾ ಗ್ರಾಮಗಳು.<br>(ಬಿ) ಸದರಿ ಪ್ರಕರಣಗಳ ಉಪಬಂಧಗಳು ಈಗಾಗಲೇ ಜಾರಿಗೆ ಬಂದಿರುವ, ಅಧಿಸೂಚನೆ ಸಂಖ್ಯೆ. ಸಿಐ 131 ಎಸ್‌ಎಡಿ 59, ದಿನಾಂಕ 8ನೇ ಏಪ್ರಿಲ್ 1960 ರಲ್ಲಿ ನಮೂದಿಸಿರುವ ಗ್ರಾಮಗಳನ್ನು ಹೊರತುಪಡಿಸಿ, ಗುಬ್ಬಿ ತಾಲೂಕಿನ ಎಲ್ಲಾ ಗ್ರಾಮಗಳು. |

The above translation of the Karnataka Silkworm Seed Cocoon and Silk Yarn (Regulation of Production, Supply, Distribution and Sale) Act, 1959 (5 of 1960) shall be the authoritative text in the Kannada Language under section 5A of the Karnataka Official Language Act, 1963 (Karnataka Act No. 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮ.ರಾ. ಹೆಗಡೆ**

ಪಿ.ಆರ್.340 ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ವಾಪ್ರಯು 66 ಪಿಐಎಫ್ 2002, ಬೆಂಗಳೂರು, ದಿನಾಂಕ: 27ನೇ ಮಾರ್ಚ್ 2004**

ಡಾ: ಜಿ. ಪರಮೇಶ್ವರ್, ಉನ್ನತ ಶಿಕ್ಷಣ ಹಾಗೂ ವಾರ್ತಾ ಇಲಾಖೆ ಸಚಿವರು, ಶ್ರೀ ಕಂಠೀರವ ಸ್ಟುಡಿಯೋಸ್ ಲಿಮಿಟೆಡ್‌ನ ಅಧ್ಯಕ್ಷರ ಸ್ಥಾನಕ್ಕೆ ಸಲ್ಲಿಸಿರುವ ರಾಜೀನಾಮೆಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಡಿ. ರವೀಂದ್ರನಾಥ್**

ಪಿ.ಆರ್.318 ಸರ್ಕಾರದ ಉಪ ಕಾರ್ಯದರ್ಶಿ,

ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

**TRANSPORT SECRETARIAT**

**NOTIFICATION No. TRD 5 TDR 2004, Bangalore, dated: 28th March 2004**

In exercise of the powers conferred by clause (c) of sub rule 3 of rule 151 of the Karnataka Motor Vehicles Rules 1989 the Government of Karnataka hereby exempts the mine stage carriages having wheel base of 476 cm owned by the Karnataka state Road Transport Corporation the North West Karnataka Road Transport Corporation the North-East Karnataka Road Transport Corporation and the Bangalore Metropolitan Transport Corporation from the provisions of sub-rules (1) and (2) of rule 151 of the said rules with immediate effect.

By Order and in the name of the Governor of Karnataka,

**K.LAKSHMIKANTHA**

P.R. 317 Under Secretary to Government, Transport Department.

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಕಾಇ 34 ಕಾಬಾನಿ 2004, ಬೆಂಗಳೂರು, ದಿನಾಂಕ: 19/26ನೇ ಮಾರ್ಚ್ 2004**

ಕಾರ್ಖಾನೆಗಳ ಕಾಯ್ದೆ, 1948ರ ಕಲಂ 66ರ ಉಪವಿಧಿ (1)(20) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಆಡಳಿತ ವರ್ಗದವರಾದ ಮೆ: ಶೆಟ್ರಾನ್ ಲಿಮಿಟೆಡ್, ಬೊಮ್ಮಸಂದ್ರ ಇಂಡಸ್ಟ್ರಿಯಲ್ ಏರಿಯಾ, ಹೊಸೂರು ರಸ್ತೆ, ಬೆಂಗಳೂರು ಈ ಕಾರ್ಖಾನೆಯಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರಿಗೆ ಎರಡನೇ ಪಾಳಿಯಲ್ಲಿ ಕೆಲಸ ಮಾಡಲು ದಿನಾಂಕ: 20.3.2004 ರಿಂದ ಒಂದು ವರ್ಷದವರಿಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅನುಮತಿ ನೀಡಲಾಗಿದೆ.

1) ಸದರಿ ಕೆಲಸಕ್ಕೆ ಮಹಿಳಾ ಕಾರ್ಮಿಕರಿಂದ ಲಿಖಿತ ಅನುಮತಿಯನ್ನು ಪಡೆಯಬೇಕು;

2) ಮಹಿಳಾ ಕಾರ್ಮಿಕರಿಂದ ಯಾವುದೇ ಸಂದರ್ಭದಲ್ಲಿ ಹೆಚ್ಚುವರಿ ಕೆಲಸ ಮಾಡಿಸಬಾರದು;

3) ಅವರನ್ನು ರಾತ್ರಿ 10.00 ಘಂಟೆಯ ತನಕ ಮಾತ್ರ ಕೆಲಸ ಮಾಡಿಸಲು ಅನುಮತಿ ನೀಡಿ ಕೆಲಸಗಾರರನ್ನು ಅವರವರ ಮನೆಗಳಿಗೆ ಕಳುಹಿಸಲು ವಾಹನ ಸೌಕರ್ಯ ಒದಗಿಸುವುದು;

4) ಸದರಿ ಕೆಲಸ ಮಾಡುವ ಮಹಿಳಾ ಕಾರ್ಮಿಕರಿಗೆ ಉಪಹಾರ ಗೃಹದ ಮತ್ತು ಶಿಶು ಸಂರಕ್ಷಣಾ ಸೌಲಭ್ಯಗಳು ಹಾಲಿ ಇದ್ದಲ್ಲಿ ಅವುಗಳನ್ನು ಒದಗಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಹೆಚ್. ಉಮಾಪತಿ**

ಪಿ.ಆರ್. 320 ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು).

**ಇಂಧನ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಇಂಇ 31 ಪಿಪಿಸಿ 2004, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2004**

ಶ್ರೀ ಎಸ್.ಎಂ. ಕೃಷ್ಣ, ಅಧ್ಯಕ್ಷರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಇವರು ದಿನಾಂಕ: 30.03.2004 ರಂದು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಅಧ್ಯಕ್ಷ ಸ್ಥಾನಕ್ಕೆ ನೀಡಿರುವ ರಾಜೀನಾಮೆಯನ್ನು ನಿಗಮನ ಮೆಮೊರ್‍ಯಾಂಡಂ ಆಫ್ ಅಸೋಸಿಯೇಷನ್ ಹಾಗೂ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಕಲಂ 22 (1) ರನ್ವಯ ದಿನಾಂಕ: 30.03.2004 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಶ್ರೀಯುತರ ರಾಜೀನಾಮೆಯಿಂದ ತೆರವಾಗಿರುವ ಕರ್ನಾಟಕ ವಿದ್ಯುತ್ ನಿಗಮದ ಅಧ್ಯಕ್ಷ ಸ್ಥಾನಕ್ಕೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ ಇವರನ್ನು ಈ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಿಗಮದ ಮೆಮೊರ್‍ಯಾಂಡಂ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಕಲಂ 22 (1) ರನ್ವಯ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 321 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ಜಲ ಸಂಪನ್ಮೂಲ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಜಸಂಇ 15 ಸಿಎಂಜಿ 2004, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2004**

ಶ್ರೀ ಪ್ರಕಾಶ್ ಬಿ. ಹುಕ್ಕೇರಿ, ಅಧ್ಯಕ್ಷರು, ಕಾಡಾ, ಮಲಪ್ರಭಾ ಮತ್ತು ಘಟಪ್ರಭಾ ಯೋಜನೆ, ಬೆಳಗಾಂವ್ ಇವರು ಸಲ್ಲಿಸಿರುವ ರಾಜೀನಾಮೆಯನ್ನು ಕರ್ನಾಟಕ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಅಧಿನಿಯಮ 1980ರ ನಿಯಮ 6(3) ರನ್ವಯ ದಿನಾಂಕ: 10.3.2004 ರಿಂದ ಜಾರಿಗೆ ಬರುವಂತೆ ಅಂಗೀಕರಿಸಿ ಅಧ್ಯಕ್ಷರ ಪದವಿಯಿಂದ ವಿಮುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ರಾಮಚಂದ್ರ**

ಪಿ.ಆರ್. 322 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಜಲ ಸಂಪನ್ಮೂಲ ಇಲಾಖೆ (ಕಾಡಾ).

**ಅಧಿಸೂಚನೆ ಸಂಖ್ಯೆ: ಜಸಂಇ 20 ಸಿಯುಕೆ 2004, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2004**

ಕರ್ನಾಟಕ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಅಧಿನಿಯಮ 1980ರ ನಿಯಮ 6(3)ರ ಅನ್ವಯ ಶ್ರೀ ಎಸ್.ಜಿ. ನಂಜಯ್ಯನಮಠ, ಅಧ್ಯಕ್ಷರು ಕೃಷ್ಣಾ ಮೇಲ್ದಂಡೆ ಯೋಜನೆ, ಭೀಮರಾಯನಗುಡಿ ಕಾಡಾ ಇವರ ರಾಜೀನಾಮೆಯನ್ನು ದಿನಾಂಕ: 23.3.2004 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ರಾಮಚಂದ್ರ**

ಪಿ.ಆರ್. 323 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಜಲ ಸಂಪನ್ಮೂಲ ಇಲಾಖೆ (ಕಾಡಾ).

**ಅಧಿಸೂಚನೆ ಸಂಖ್ಯೆ: ಜಸಂಇ 9 ಸಿಎಟಿ 2004, ಬೆಂಗಳೂರು, ದಿನಾಂಕ: 2ನೇ ಏಪ್ರಿಲ್ 2004**

ಶ್ರೀ ಕೆ. ವಿರೂಪಾಕ್ಷಪ್ಪ, ಅಧ್ಯಕ್ಷರು, ತುಂಗಭದ್ರಾ ಕಾಡಾ, ಮುನಿರಾಬಾದ್ ಇವರ ರಾಜೀನಾಮೆಯನ್ನು ಕರ್ನಾಟಕ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಅಧಿನಿಯಮ 1980ರ ನಿಯಮ 6(3) ರನ್ವಯ ದಿನಾಂಕ: 30.3.2004 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ವಾಸುದೇವ ಹೆಬ್ಬಾರ್**

ಪಿ.ಆರ್.324 ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಕಾಡಾ).

**LAW SECRETARIAT**

**NOTIFICATION No. LAW 186 LCA 2002, Bangalore, dated: 27th March 2004**

In exercise of the powers conferred by Article 234 of the Constitution of India, His Excellency the Governor of Karnataka is pleased to appoint Sri P.G. Cheluvamurthy selected under the Karnataka Judicial Service (Recruitment) Rules, 1983, as Civil Judge (Junior Division) in Karnataka Judicial Service in the pay scale of Rs.9000-250-10750-300-13150-350-14550. He will be on probation for a period of two years from the date of reporting to duty.

By Order and in the name of the Governor of Karnataka,

**A.P. RAMAKRISHNA**

P.R. 325 Under Secretary to Government (I/c), Law Department (Admn-1).

**DEPARTMENT OF PERSONNEL AND ADMINISTRATIVE REFORMS SECRETARIAT**

**NOTIFICATION No. DPAR 120 SPS 2003, Bangalore, dated: 25th March 2004**

The Government of India, Ministry of Home Affairs, New Delhi, Notification No.1-18011/1/2004-IPS.IV dated: 24th February 2004 is hereby republished.

**No.1-18011/1/2004-IPS.IV**

**Government of India**

**Ministry of Home Affairs**

**New Delhi, dated the 24th February, 2004**

**NOTIFICATION**

In exercise of powers conferred by Rule-3A of Indian Police Service (Probation) Rules, 1954, the President is pleased to confirm Ms. Roopa D, IPS (KTK:2000), in Indian Police Service with effect from 04.09.2002.

**J.B. KAUSHISH**
DESK OFFICER,
TEL.NO:011-23094038

No.I-18011/1/2004-IPS.IV Dated the 24th February 2004

By Order and in the name of the Governor of Karnataka,

**K. RAGHURAM BHANDARY**

P.R. 326 Under Secretary to Government (IC)
Department of Personnel and Administrative Reforms (Services).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ 86 ಸಆಸೇ 2004, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2004**

ಶ್ರೀ ಬಿ. ಪುಟ್ಟಣ್ಣ, ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-2) ಕರ್ನಾಟಕ ಸರ್ಕಾರದ ಸಚಿವಾಲಯ ಇವರು ದಿನಾಂಕ: 27.5.2002 ರಿಂದ 30.6.2002 ರವರೆಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ ಸ್ಥಳ ನಿಯುಕ್ತಿಗಾಗಿ ಕಾಯ್ದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 8 (15) (ಎಫ್)ರ ಅನ್ವಯ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 327 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ಸಮಾಜ ಕಲ್ಯಾಣ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಕಇ 188 ಎಸ್‌ಡಿಸಿ 2003, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2004**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಕಇ 188 ಎಸ್‌ಡಿಸಿ 2003, ದಿನಾಂಕ: 23.10.2003 ರಲ್ಲಿ ಶ್ರೀಯುತ ಹೆಚ್. ಆಂಜನೇಯ, ಭರಮಸಾಗರ ರವರನ್ನು ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭಿವೃದ್ಧಿ ನಿಗಮ ನಿಯಮಿತ ಇದರ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿದ್ದು, ಸದರಿ ಶ್ರೀ ಹೆಚ್. ಆಂಜನೇಯ ರವರು ಅನಿವಾರ್ಯ ಕಾರಣಗಳನ್ನು ನೀಡಿ, ರಾಜಿನಾಮೆ ಸಲ್ಲಿಸಿದ್ದು ಸದರಿ

ನಿಗಮದ ಅಧ್ಯಕ್ಷರಾದ ಶ್ರೀ ಹೆಚ್. ಆಂಜನೇಯರವರ ರಾಜಿನಾಮೆಯನ್ನು ದಿನಾಂಕ: 31.03.2004 ರಿಂದ ಜಾರಿಗೆ ಬರುವಂತೆ ಸರ್ಕಾರವು ರಾಜಿನಾಮೆಯನ್ನು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮರುಳಸಿದ್ದಯ್ಯ**

ಪಿ.ಆರ್.328 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

**ಅಧಿಸೂಚನೆ ಸಂಖ್ಯೆ: ಸಕಇ 191 ಎಸ್‌ಎಡಿ 2002, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2004**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಕಇ 191 ಎಸ್‌ಎಡಿ 2002, ದಿನಾಂಕ: 01.01.2003 ರಲ್ಲಿ ನೆಲಮಂಗಲ ಕ್ಷೇತ್ರದ ವಿಧಾನಸಭಾ ಸದಸ್ಯರಾದ ಶ್ರೀ ಅಂಜನ್‌ಮೂರ್ತಿ ರವರನ್ನು ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗದ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿದ್ದು, ಸದರಿ ಶ್ರೀ ಅಂಜನ್‌ಮೂರ್ತಿ ರವರು ವೈಯಕ್ತಿಕ ಕಾರಣಗಳನ್ನು ನೀಡಿ, ರಾಜಿನಾಮೆ ಸಲ್ಲಿಸಿದ್ದು ಸದರಿ ಆಯೋಗದ ಅಧ್ಯಕ್ಷರಾದ ಶ್ರೀ ಅಂಜನಮೂರ್ತಿ ರವರ ರಾಜಿನಾಮೆಯನ್ನು ದಿನಾಂಕ: 29.03.2004 ರಿಂದ ಜಾರಿಗೆ ಬರುವಂತೆ ಸರ್ಕಾರವು ರಾಜಿನಾಮೆಯನ್ನು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮರುಳಸಿದ್ದಯ್ಯ**

ಪಿ.ಆರ್.329 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಒಸಾಇ 164 ಪಿಎಂಎಸ್ 2003, ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2004**

1872ರ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ ಕಾಯಿದೆಯ 6 ಮತ್ತು 9ನೇ ಕಲಂನಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ (ಕರ್ನಾಟಕ) ನಿಯಮಗಳು 1961 ರಂತೆ ಕಾರ್ಯ ನಿರ್ವಹಿಸಲು - ಪಾಸ್ಟರ್ ಎಸ್. ಜೀವಪ್ರಕಾಶ್ "ದಿ ಎಬೆನೆಜರ್ ಫುಲ್ ಗೊಸ್ಪೆಲ್ ಅಸೆಂಬ್ಲಿ" ಕ್ರಿಶ್ಚಿಯನ್ ಕಾಲೋನಿ, ಶ್ರೀರಾಂಪುರಂ, ಬೆಂಗಳೂರು-21 ಇವರಿಗೆ ಮೇಲಿನ ಕಾಯಿದೆಯಡಿಯಲ್ಲಿ ಕರ್ನಾಟಕದಲ್ಲಿ ವಿವಾಹ ವಿಧಿಯನ್ನು ನೆರವೇರಿಸಲು ಪರವಾನಿಗೆಯನ್ನು ಈ ಮೂಲಕ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ಕಾಂತರಾಜು**

ಪಿ.ಆರ್. 330 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ರಹದಾರಿ ಮತ್ತು ವಿದೇಶಿಯರು).

**ಅಧಿಸೂಚನೆ ಸಂಖ್ಯೆ: ಒಸಾಇ 211 ಪಿಎಂಎಸ್ 2003, ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2004**

1872ರ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ ಕಾಯಿದೆಯ 6 ಮತ್ತು 9ನೇ ಕಲಂನಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ (ಕರ್ನಾಟಕ) ನಿಯಮಗಳು 1961 ರಂತೆ ಕಾರ್ಯ ನಿರ್ವಹಿಸಲು ರೆವರೆಂಡ್, ಎಸ್. ಜಾನ್ ಮಾರ್ಕ್, ಶಾರೋನ್ ಪ್ರಾರ್ಥನಾ ಮಂದಿರಾ, ಹೊಸಮೋಕಾ ಗ್ರಾಮ - 583117, ಬಳ್ಳಾರಿ (ತಾ), ಬಳ್ಳಾರಿ ಜಿಲ್ಲೆ ಇವರಿಗೆ ಮೇಲಿನ ಕಾಯಿದೆಯಡಿಯಲ್ಲಿ ಕರ್ನಾಟಕದಲ್ಲಿ ವಿವಾಹ ವಿಧಿಯನ್ನು ನೆರವೇರಿಸಲು ಪರವಾನಿಗೆಯನ್ನು ಈ ಮೂಲಕ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ಕಾಂತರಾಜು**

ಪಿ.ಆರ್. 331 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ರಹದಾರಿ ಮತ್ತು ವಿದೇಶಿಯರು).

## ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ನಅಇ 125 ಬೆಮಪ್ರಾ 2004, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್ 2004**

ಕಾರವಾರ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಅಶೋಕ್ ಶಂಕರನಾಯಕ್ ಇವರ ರಾಜೀನಾಮೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅಂಗೀಕರಿಸಿದೆ ಹಾಗೂ ಇವರ ಸ್ಥಾನದಲ್ಲಿ ಕಾರವಾರ ಜಿಲ್ಲಾಧಿಕಾರಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕಾರವಾರ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿದೆ.-

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀಧರಮೂರ್ತಿ**

ಪಿ.ಆರ್. 332 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ ಸಂಖ್ಯೆ: ನಅಇ 209 ಮೈಅಪ್ರಾ 2004, ಬೆಂಗಳೂರು, ದಿನಾಂಕ: 5ನೇ ಏಪ್ರಿಲ್ 2004**

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಸಂದೇಶ್ ನಾಗರಾಜು ಇವರ ರಾಜೀನಾಮೆಯನ್ನು ದಿನಾಂಕ: 2.4.2004 ರಿಂದ ಜಾರಿಗೆ ಬರುವಂತೆ ಅಂಗೀಕರಿಸಿ, ಇವರ ಸ್ಥಾನದಲ್ಲಿ ಶ್ರೀ ಟಿ.ಎಂ. ವಿಜಯಭಾಸ್ಕರ್, ಭಾ.ಆ.ಸೇ., ಆಯುಕ್ತರು, ಪುರಾತತ್ವ ವಸ್ತು ಸಂಗ್ರಹಾಲಯಗಳು ಮತ್ತು ಪರಂಪರಾ ಇಲಾಖೆ, ಮೈಸೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀಧರಮೂರ್ತಿ**

ಪಿ.ಆರ್. 333 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಸಮಾಜ ಕಲ್ಯಾಣ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಕಇ 108 ಬಿಎಂಎಸ್ 2004, ಬೆಂಗಳೂರು, ದಿನಾಂಕ: 5ನೇ ಏಪ್ರಿಲ್ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: 438 ಬಿಎಂಎಸ್ 2003, ದಿನಾಂಕ: 28.10.2003 ರಲ್ಲಿ ಶ್ರೀ ಬಂಡೆಪ್ಪ ಕಾಶೀಂಪೂರರವರನ್ನು ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿದ್ದು, ಸದರಿ ಶ್ರೀ ಬಂಡೆಪ್ಪ ಕಾಶೀಂಪೂರರವರು ಸ್ವಇಚ್ಛೆಯಿಂದ ರಾಜೀನಾಮೆ ಸಲ್ಲಿಸಿದ್ದು, ಸದರಿ ನಿಗಮದ ಅಧ್ಯಕ್ಷರಾದ ಶ್ರೀ ಬಂಡೆಪ್ಪ ಕಾಶೀಂಪೂರರವರ ರಾಜೀನಾಮೆಯನ್ನು ದಿನಾಂಕ: 22.3.2004 ರಿಂದ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿದೆ.-

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಪ್ರಾಣದೇವ**

ಪಿ.ಆರ್.334 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ 66 ಯೋಮಸ 2003, ಬೆಂಗಳೂರು, ದಿನಾಂಕ: 2ನೇ ಏಪ್ರಿಲ್ 2004**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ದ (2000ದ ಕರ್ನಾಟಕ ಅಧಿನಿಯಮ 28) ಪ್ರಕರಣ 2ರ (ಎ) ಖಂಡದಲ್ಲಿ ಪ್ರದತ್ತವಾದ ಅಧಿಕಾರದನ್ವಯ ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯಕ್ಕೆ ಸಂಬಂಧಿಸಿದಂತೆ ಮಾನ್ಯ ಮುಖ್ಯಮಂತ್ರಿಯವರ ಜಂಟಿ ಕಾರ್ಯದರ್ಶಿಯವರನ್ನು ಸಕ್ಷಮ ಪ್ರಾಧಿಕಾರ ಎಂದು ಹಾಗೂ ಇದೇ ಅಧಿನಿಯಮದ 7ನೇ ಪ್ರಕರಣ ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002ರ 5ನೇ ನಿಯಮದ (1)ನೇ ಉಪ ನಿಯಮದನ್ವಯ ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಯವರನ್ನು ಅಪೀಲು ಪ್ರಾಧಿಕಾರ ಎಂದು ಈ ಮೂಲಕ ನೇಮಕ ಮಾಡಲಾಗಿದೆ.

ಇದೇ ರೀತಿ ಸಂಪುಟ ದರ್ಜೆಯ ಸಚಿವರ ಕಛೇರಿಗಳಿಗೆ ಸಂಬಂಧಿಸಿದಂತೆ ಮತ್ತು ರಾಜ್ಯ ಸಚಿವರ ಕಛೇರಿಗಳಿಗೆ ಸಂಬಂಧಿಸಿದಂತೆ ಆಯಾ ಸಚಿವರ ಆಪ್ತ ಕಾರ್ಯದರ್ಶಿಗಳನ್ನು ಸಕ್ಷಮ ಪ್ರಾಧಿಕಾರವೆಂದು ಹಾಗೂ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರನ್ನು ಅಪೀಲು ಪ್ರಾಧಿಕಾರವೆಂದು ಈ ಮೂಲಕ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಸಿ. ಪೂಣಚ್ಚ**

ಪಿ.ಆರ್.335 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಾರ್ವಜನಿಕ ದೂರು ನಿವಾರಣಾ ವಿಭಾಗ).

**DEPARTMENT OF PERSONNEL AND ADMINISTRATIVE REFORMS SECRETARIAT**

**CORRIGENDUM No. DPAR 1 SFP 2003 (6), Bangalore, dated: 31st March 2004**

The Second para of the Notification of even number dated: 11.7.2003 shall be and shall always be deemed to have been substituted by the following:-

"The orders issued in Government Notification No. DPAR 1 SFP 2003 (8) dated: 28.6.2003, posting Sri Rangegowda, IFS (KN-92) as Deputy Conservator of Forests, Karwar Division, Karwar stand cancelled and he is reposted as Deputy Conservator of Forests, working Plan and Survey, Chikmagalur, until further orders".

By Order and in the name of the Governor of Karnataka,

**B.V. KUMARA SWAMY**

P.R. 336 Under Secretary to Government,

Department of Personnel and Administrative Reforms (Services-1).

**KARNATAKA GOVERNOR'S SECRETARIAT**

**NOTIFICATION No. GS 2 AUM 2004, Bangalore, dated: 14th April 2004**

WHEREAS, the tenure of Office of Dr. A.M. Krishnappa as Vice-Chancellor, University of Agricultural Sciences, Bangalore expires on 19th April, 2004.

WHEREAS, a Committee was constituted under Sub-Section (2) of Section 12 of the Karnataka Universities of Agricultural Sciences Act 1963 to recommend a panel of names for selection to the post of Vice-Chancellor, University of Agricultural Sciences, Bangalore.

WHEREAS, the panel of names recommended by the Selection Committee has been considered.

AND NOW, THEREFORE, in exercise of the powers conferred on me under Section 12(2) of the Karnataka Universities of Agricultural Sciences Act 1963, I, T.N. CHATURVEDI, Governor of Karnataka and Chancellor, University of Agricultural Sciences, Bangalore, hereby appoint Dr. M.N. Sheelavantar, Registrar and Professor of Agronomy, University of Agricultural Sciences, Dharwad as Vice-Chancellor of the University of Agricultural Sciences, Bangalore, for a period of three years with effect from 20.04.2004.

**T.N. CHATURVEDI**

GOVERNOR & CHANCELLOR,

**C.S. SURANJANA**

P.R. 337 Principal Secretary to Governor

**NOTIFICATION No. GS 4 TUM 2004, Bangalore, dated: 8th April 2004**

In exercise of the powers conferred under Section 19(2) read with Section 22 of the Visvesvaraya Technological University Act 1994, I, T.N. CHATURVEDI, Chancellor of the Visvesvaraya Technological University, Belgaum, am pleased to reconstitute the Academic Senate of the University, as under, with effect from the date of this notification.

| | | |
|---|---|---|
| 1. | The Vice-Chancellor | Under Section 22 (1) |
| 2. | Secretary to Government in-charge of Higher Education or his nominee not below the rank of Deputy Secretary. | Under Section 22 (2) |
| 3. | Director, Technical Education | Under Section 22 (3) |
| 4. | Dr. M.G. Venkatesh Murthy, Prof. of Computor Science & Engineering, Malnad College of Engineering, Hassan. | Under Section 22 (5) |
| 5. | (i) Dr. Anantha Krishna, Professor of Architecture, R.V. College of Engineering, Bangalore. | Under Section 22 (8) |
| | (ii) Dr. Ramtal, Professor of Textile Technology, Government SKSJ Technological Institute, Bangalore. | - do - |
| | (iii) Prof. H.S. Ramesha, Prof. of Environmental Engineering, Sri Jayachamarajendra College of Engineering, Mysore. | - do - |
| | (iv) Dr. Lingana Gowda K., Professor of Instrumentation Technology, BVB College of Engineering, Hubli. | - do - |
| 6. | 1. Dr. Ashok S. Shettar, Principal, BVB College of Engineering, Hubli. | Under Section 22 (9) Ten Principals of the affiliated Colleges. |
| | 2. Dr. B. Chandrashekar, Principal PES College of Engineering, Mandya. | |
| | 3. Dr. V.D. Mytri, Principal, PDA College of Engineering Gulbarga. | |
| | 4. Dr. B.G. Sangameshwara, Principal, SJ College of Engineering, Mysore. | |
| | 5. Dr. R.N. Herkal, Principal, Basaveswara Engineering College, Bagalkot. | |
| | 6. Dr. C. Prabhakar Reddy, Principal, Sri Venkateswara College of Engineering, Bangalore. | |
| | 7. Dr. V. Ramarajan, Principal, M.V.J. College of Engineering, Bangalore. | |
| | 8. Dr. D.H. Rao, Principal, Gogte Institute of Technology, Belgaum. | |
| | 9. Dr. K.N. Balasubramanya Murthy, Principal, East West Institute of Technology, Bangalore. | |
| | 10. Dr. D.N. Shivappa, Principal, STJ College of Engineering, Ranibennur. | |
| 7. | 1. Dr. K. Ramachandra, GTRE, New BEL Road, CV Raman Nagar, Bangalore. | Under Section 22 (10) Two Heads of Research Labs & Institutions. |
| | 2. Dr. P.S. Goel, ISRO-ISAC, Airport Road, Bangalore. | |
| 8. | a) Sri K. Shivashankar, Retd. Engineering In-Chief, Plot No.10, I Main, II Stage, Hanuman Nagar, Belgaum. | Under Section 22 (11) Three eminent persons having technical back-ground each belonging to (a) SC / ST.` (b) Backward Class (c) Religious Minority. |
| | b) Sri Nirmal Kumar, Divisional Manager, Mangalore Chemical & Fertilizers, New Mangalore-575010. | |
| | c) Sri Bhushan B. Mirji, "Deepa", Near Law College, Hindwadi, Belgaum. | |
| 9. | The Registrar shall act as non-member Secretary of the Academic Senate. | Under Section 22 (12) |

The Term of Office of the Members of the Academic Senate shall be three years from the date of this Notification.

CHANCELLOR,
**M.V. JAGANNATHA GUPTA**
Under Secretary to Governor

P.R. 338

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಕಾಇ 56 ಕಾಬಾನಿ 2004, ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2004**

ದಿ ಇಂಡಿಯನ್ ಬಾಯ್ಲರ್ ಅಧಿನಿಯಮ 1923ರ ಸೆಕ್ಷನ್ 34(2) ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೆ: ಮಂಗಳೂರು ಕೆಮಿಕಲ್ಸ್ ಅಂಡ್ ಫರ್ಟಿಲೈಜರ್ಸ್ ಲಿಮಿಟೆಡ್, ಮಂಗಳೂರು-575010 ರವರ ಬಾಯ್ಲರ್ ಸಂಖ್ಯೆ: ಎಂವೈಎಸ್-1491 ಅನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ದಿನಾಂಕ: 03.04.2004 ರಿಂದ ದಿನಾಂಕ: 02.05.2004 ರವರೆಗೆ ಸದರಿ ಕಾಯ್ದೆಯ ಅಧಿನಿಯಮ 8 ರಿಂದ ವಿನಾಯಿತಿಯನ್ನು ನೀಡಿದೆ.

1. ಈ ಹಿಂದೆ ನೀಡಲಾಗಿರುವ ಚಾಲ್ತಿ ಪ್ರಮಾಣ ಪತ್ರ ಬಾಹಿಪಮಂ/ಬಾಯ್ಲರ್/ಸಿಎಫ್‌ಎನ್-06/03-04 ರಲ್ಲಿ ಅನುಮತಿಸಿದ ಕಾರ್ಯ ಒತ್ತಡವಾದ 90.34 ಕೆಎಸ್‌ಸಿ ಪರಿಮಿತಿಯಲ್ಲಿಯೇ ಬಾಯ್ಲರ್ ಚಾಲನೆ ಮಾಡುವುದು;
2. ಬಾಯ್ಲರ್ ಗರಿಷ್ಠ ಎಂಸಿಆರ್ 60 ಟನ್ನು/ತಾಸಿಗೆ ಇರುವ ಹಬೆ ಉತ್ಪಾದನೆ ಮೀರಬಾರದು;
3. ಬಾಯ್ಲರನ್ನು ನಿಯಮಿತವಾಗಿ ಬ್ಲೂಡೌನ್ ಮತ್ತು ಸೂಟ್‌ಬ್ಲೋವಿಂಗ್ ಮಾಡಿ ವಿವರಗಳನ್ನು ಲಾಗ್ ಪುಸ್ತಕದಲ್ಲಿ ನಮೂದಿಸುವುದು;
4. ಫೀಡ್ ವಾಟರ್ ಟ್ರೀಟ್‌ಮೆಂಟ್ ಮತ್ತು ಕಂಡೀಶನ್ ಕ್ರಮಬದ್ಧವಾಗಿರಬೇಕು;
5. ಬಾಯ್ಲರ್ ಚಾಲನೆಗೆ ನಿಯಮಾನುಸಾರ ಬಾಯ್ಲರ್ ಅಪರೇಶನ್ ಇಂಜಿನಿಯರ್ಸ್ ಪ್ರತಿ ಶಿಫ್ಟ್‌ನಲ್ಲಿ ನಿಯೋಜಿಸಿ ವಿವರಗಳನ್ನು ಲಾಗ್ ಪುಸ್ತಕದಲ್ಲಿ ನಮೂದಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಹೆಚ್. ಉಮಾಪತಿ**

ಪಿ.ಆರ್.339 ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು).

**EDUCATION SECRETARIAT**

**NOTIFICATION No. ED 47 TEC 2004, Bangalore, dated: 15th April 2004**

In exercise of the powers conferred by sub-clause (ii) of clause (e) and clause (j) of rule 2 of the Karnataka Selection of Candidates for Admission to Master of Business Administration and Master of Computer Application Courses Rules, 2000, the Government of Karnataka hereby prescribes 50% of the seats in the affiliated colleges as "Government Seats" and the remaining 50% of the seats as management seats for the academic year 2004-05.

By Order and in the name of the Governor of Karnataka,

**K.S. VENUGOPAL**

P.R. 341 Under Secretary to Government, Education Department.

**ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಮಮಅ/36/ಮಅನಿ/2004, ಬೆಂಗಳೂರು, ದಿನಾಂಕ: 12ನೇ ಏಪ್ರಿಲ್ 2004**

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ಮೆಮೋರಾಂಡಮ್ ಮತ್ತು ಆರ್ಟಿಕಲ್ಸ್ ಆಫ್ ಅಸೋಷಿಯೇಷನ್ ಅನುಚ್ಛೇದ 19(1)4 ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಬಳಸಿ ರಾಜ್ಯ ಸರ್ಕಾರವು ಕೆಳಕಾಣಿಸಿದ ಅಧಿಕಾರಿಯವರನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು ಇದರ ನಿರ್ದೇಶಕ ಮಂಡಳಿಗೆ ಅವರ ಹೆಸರಿನ ಮುಂದೆ ತೋರಿಸಲಾಗಿರುವ ಸ್ಥಾನದಲ್ಲಿ ನಿರ್ದೇಶಕ ಸ್ಥಾನಕ್ಕೆ ನಾಮ ನಿರ್ದೇಶನ ಮಾಡಲಾಗಿದೆ.

| ನಾಮ ನಿರ್ದೇಶಕರಾದವರ ಹೆಸರು | ಯಾರ ಬದಲಿಗೆ ನಾಮ ನಿರ್ದೇಶನ ಮಾಡಿದೆ - ವಿವರ |
|---|---|
| ಶ್ರೀ ಗೋನಾಳ್ ಭೀಮಪ್ಪ ಭಾ.ಆ.ಸೇ.,<br>ನಿರ್ದೇಶಕರು, ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ,<br>ಬೆಂಗಳೂರು. | ಶ್ರೀ ಜಯರಾಮರಾಜ ಅರಸ್, ಭಾ.ಆ.ಸೇ.,<br>ಹಿಂದಿನ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,<br>ಬೆಂಗಳೂರು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಂ. ಚಂದ್ರಮ್ಮ**

ಪಿ.ಆರ್.342 ಸರ್ಕಾರದ ಅಧೀನ ಕಾರ್ಯದರ್ಶಿ-1, ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

**ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಒಸಾಇ 194 ಪಿಎಂಎಸ್ 2003, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2004**

1872ರ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ ಕಾಯಿದೆಯ 6 ಮತ್ತು 9ನೇ ಕಲಂನಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ (ಕರ್ನಾಟಕ) ನಿಯಮಗಳು 1961 ರಂತೆ ಕಾರ್ಯನಿರ್ವಹಿಸಲು ಪಾಸ್ಟರ್ ಜೆ. ವಿಜಯ ಕುಮಾರ್, ಹೊಸನ್ನ ಪ್ರಾರ್ಥನಾ ಮಂದಿರ, ನಂ.6/3, ಮೂರನೇ ಮಹಡಿ, ಗುರುಕೃಪ ನಿಲಯ, ಅರುಣಾಚಲಂ ಸರ್ಕಲ್, 5ನೇ ಮುಖ್ಯ ರಸ್ತೆ, ಶ್ರೀರಾಂಪುರಂ, ಬೆಂಗಳೂರು - 560 021 ಇವರಿಗೆ ಮೇಲಿನ ಕಾಯಿದೆಯಡಿಯಲ್ಲಿ ಕರ್ನಾಟಕದಲ್ಲಿ ವಿವಾಹ ವಿಧಿಯನ್ನು ನೆರವೇರಿಸಲು ಪರವಾನಿಗೆಯನ್ನು ಈ ಮೂಲಕ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.343 **ಎ.ಎಸ್. ಕಾಂತರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ (ರಹದಾರಿ ಮತ್ತು ವಿದೇಶಿಯರು).